KA / BG-GPO / 2515 / WPP-47 / 2006-2008

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಡಿಸೆಂಬರ್ ೬, ೨೦೦೭ (ಮಾರ್ಗಶಿರ ೧೫, ಶಕ ವರ್ಷ ೧೯೨೯) | ಸಂಚಿಕೆ ೪೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಶಿಕ್ಷಣ ಸಚಿವಾಲಯ

**ವಿಷಯ:** ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2005ರ ಹಿನ್ನೆಲೆಯ ಮೇರೆಗೆ ಶಾಲಾ ಶಿಕ್ಷಣದಲ್ಲಿ 1 ರಿಂದ 10ನೇ ತರಗತಿಯಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗಾಗಿ ದೈಹಿಕ ಮತ್ತು ಆರೋಗ್ಯ ಶಿಕ್ಷಣದ ಪಠ್ಯವಸ್ತುವನ್ನು ಅಳವಡಿಸುವ ಬಗ್ಗೆ

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಇಡಿ 145 ಯೋಯೋಕ 2006, ಬೆಂಗಳೂರು, ದಿನಾಂಕ:27–06–2006.
2)ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆರವರ ಪತ್ರ ಸಂಖ್ಯೆ:ಇವಿಜಿ.1.ದೈ.ಶೀ. 1/2007–08 ದಿನಾಂಕ 19–6–2007 ಮತ್ತು 23–7–2007.

**ಪ್ರಸ್ತಾವನೆ:–**

ಶಿಕ್ಷಣ ಎಂದರೆ ಮನುಷ್ಯನ ಸರ್ವತೋಮುಖ ಬೆಳವಣಿಗೆ. "ಆರೋಗ್ಯವಾದ ಮನಸ್ಸು ಆರೋಗ್ಯವಾದ ದೇಹದೊಳಗೆ" ಎನ್ನುವ ನಾಣ್ನುಡಿಯಂತೆ ಮಗುವಿನ ಸರ್ವಾಂಗೀಣ ಬೆಳವಣಿಗೆ ಮಾಡುವುದೇ ಶಿಕ್ಷಣದ ಗುರಿ. ಶಾರೀರಿಕ, ಬೌದ್ಧಿಕ, ಸಾಮಾಜಿಕ, ನೈತಿಕ ವಿಕಾಸವನ್ನುಂಟು ಮಾಡುವಲ್ಲಿ ದೈಹಿಕ ಹಾಗೂ ಆರೋಗ್ಯ ಶಿಕ್ಷಣ ಮಹತ್ವದ ಪಾತ್ರವನ್ನು ವಹಿಸುತ್ತದೆ. ಆದ್ದರಿಂದಲೇ ದೈಹಿಕ ಶಿಕ್ಷಣ ಕ್ಷೇತ್ರವನ್ನು ಶಿಕ್ಷಣದ ಅವಿಭಾಜ್ಯ ಅಂಗ ಎಂಬುದಾಗಿ ಪರಿಗಣಿಸಬೇಕಾದ ಅವಶ್ಯಕತೆ ಇದೆ.

2. ದೈಹಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ, ಹೊಸ ರಾಷ್ಟ್ರೀಯ ನೀತಿಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕೆ.ಪಿ.ಸಿಂಗ್ ದೇವ್ ಸಮಿತಿಯ ಶಿಫಾರಸ್ಸುಗಳು ಗಮನರ್ಹಾವಾಗಿವೆ. 2001–02ರಲ್ಲಿ ನಿರ್ದೇಶಕರು (ಪ್ರೌಢ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ರಚನೆಯಾದ ಸಮಿತಿಯು ಕೆ.ಪಿ.ಸಿಂಗ್‌ದೇವ್ ಸಮಿತಿಯ ಶಿಫಾರಸ್ಸುಗಳನ್ನು ಕೂಲಂಕಷವಾಗಿ ಪರಾಮರ್ಶಿಸಿ, ಈ ಸಮಿತಿಯ ಶಿಫಾರಸ್ಸುಗಳನ್ನು ಸಮಗ್ರವಾಗಿ ಅನುಷ್ಠಾನಕ್ಕೆ ತರಲು ಶಿಫಾರಸ್ಸು ಮಾಡಿತು.

3. 2003–04 ರಲ್ಲಿ ಶಿಕ್ಷಣ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ವಿಷಯ ಸಮಿತಿಯು ಸದರಿ ಸಮಿತಿಯ ಶಿಫಾರಸ್ಸುಗಳನ್ನು ಆಧಾರವಾಗಿಟ್ಟುಕೊಂಡು ಶಾಲಾ ಕಾಲೇಜುಗಳಲ್ಲಿ ದೈಹಿಕ ಶಿಕ್ಷಣವನ್ನು ಕಡ್ಡಾಯ ವಿಷಯವನ್ನಾಗಿ ಮಾಡಲು ಶಿಫಾರಸ್ಸು ಮಾಡಿತು.

4. 2004–05 ರಲ್ಲಿ ಕರ್ನಾಟಕ ಸರ್ಕಾರವು ತ್ರೈಮಾಸಿಕ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದಿತು. ಈ ಶಿಕ್ಷಣ ಪದ್ಧತಿಯಲ್ಲಿ ದೈಹಿಕ ಶಿಕ್ಷಣವನ್ನು ಸಹ ಪಠ್ಯದಲ್ಲಿ ಸೇರಿಸಿ, ಜೀವನ ವಿಜ್ಞಾನದ ಒಂದು ಭಾಗವನ್ನಾಗಿ ಪರಿಗಣಿಸಿ, ಯೋಗ ಶಿಕ್ಷಣಕ್ಕೆ ಹೆಚ್ಚು ಮಹತ್ವ ನೀಡಿದೆ.

5. ನಂತರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು–2005 ರ ಹಿನ್ನೆಲೆಯಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ ದೈಹಿಕ ಶಿಕ್ಷಣದ ಪಠ್ಯವಸ್ತುವನ್ನು ಪರಿಷ್ಕರಿಸಬೇಕಾಗಿರುತ್ತದೆ. NCF–2005 ನಲ್ಲಿ ದೈಹಿಕ ಶಿಕ್ಷಣಕ್ಕೆ ಹೆಚ್ಚು ಮಹತ್ವ ನೀಡಲಾಗಿದೆ. "The National Curriculum Framework 2005 of NCERT has recommended that Physical Education should be considered on par with any other curriculum subjects, since these components are important for the overall

development of the child, hence needs to be included in the curriculum. Further, it has suggested that Physical Education as core part of the Curriculum: time allocated must not be reduced or taken away under any circumstances."

6. Further, the frame work has stated that the human resource dimension is critical for both Yoga and Physical Education. It is mandatory for all Educational Institutions to appoint trained and qualified teachers in health, yoga and physical education. The number of teachers in Physical Education should be proportionate to the number of students and these teachers should be fully at par with other regular subject teachers.

7. NCF-2005 ನ್ನು ಆಧಾರವನ್ನಾಗಿಟ್ಟುಕೊಂಡು, ಈಗಿರುವ ದೈಹಿಕ ಶಿಕ್ಷಣದ ಚಟುವಟಿಕೆಗಳು, ಗುಣಮಟ್ಟ, ಕಾರ್ಯ ವಿಧಾನವನ್ನು ಪರಿಶೀಲಿಸಿ, ಸಮಗ್ರವಾದ ಕ್ರೀಡಾ ನೀತಿಯನ್ನು ರೂಪಿಸುವ ಸಲುವಾಗಿ, ಸರ್ಕಾರಿ ಆದೇಶ ಸಂಖ್ಯೆ:ಇಡಿ 145 ಯೋಯೋಕ 2006, ಬೆಂಗಳೂರು, ದಿನಾಂಕ 27–6–2006 ರಲ್ಲಿ ಪ್ರೊ.ಎಲ್.ಆರ್.ವೈದ್ಯನಾಥನ್, ನಿವೃತ್ತ ಪ್ರಾಧ್ಯಾಪಕರು, ದೈಹಿಕ ಶಿಕ್ಷಣ ಮಹಾವಿದ್ಯಾಲಯ, ಬೆಂಗಳೂರು, ಇವರ ಅಧ್ಯಕ್ಷತೆಯಲ್ಲಿ ಒಂದು ತಜ್ಞರ ಸಮಿತಿಯನ್ನು ರಚಿಸಿತು. ಈ ಸಮಿತಿಯು ರಾಜ್ಯದ ಶಾಲಾ ವ್ಯವಸ್ಥೆಯಲ್ಲಿ ಈಗಿರುವ ಸ್ಥಿತಿಗತಿಗಳ ಸಮಗ್ರ ಸಮೀಕ್ಷಾ ಅಧ್ಯಯನ ನಡೆಸಿ ತನ್ನ ವರದಿಯನ್ನು ಸಲ್ಲಿಸಿದ್ದು, ಇದನ್ನು ಪರಿಗಣಿಸುವ ಅವಶ್ಯಕತೆ ಇದೆ.

8. ಪ್ರೊ.ಎಲ್.ಆರ್.ವೈದ್ಯನಾಥನ್ ಅಧ್ಯಕ್ಷತೆಯಲ್ಲಿ ರಚಿಸಿದ ದೈಹಿಕ ಶಿಕ್ಷಣ ತಜ್ಞರ ಸಮಿತಿಯು ಸಲ್ಲಿಸಿರುವ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಲು ಡಾ:ಆನಂದ ನಾಡಿಗೇರ, ಪ್ರಾಚಾರ್ಯರು, ಎಂ.ವಿ.ಎ.ಎಸ್., ಶ್ರೀ ಕೆ.ಜಿ.ನಾಡಿಗೇರ ದೈಹಿಕ ಶಿಕ್ಷಣ ಮಹಾವಿದ್ಯಾಲಯ, ಧಾರವಾಡ ಇವರ ಅಧ್ಯಕ್ಷತೆಯಲ್ಲಿ ರಚಿಸಿದ ಪಠ್ಯ ವಸ್ತು ರಚನಾ ಸಮಿತಿಯ ಈ ಕೆಳಗಿನಂತೆ ನೀತಿಗಳನ್ನು ರೂಪಿಸಿದೆ:

1. ಪ್ರಾಥಮಿಕ ಶಾಲಾ ಹಂತದಿಂದಲೇ ದೈಹಿಕ ಶಿಕ್ಷಣವು ಬೋಧನಾ ವಿಷಯವಾಗಿರಬೇಕು ಮತ್ತು ಪರೀಕ್ಷಾ ವಿಷಯವಾಗಿರಬೇಕು.
2. ದೈಹಿಕ ಶಿಕ್ಷಣವು ಇತರ ವಿಷಯಗಳಂತೆ ಪಠ್ಯ ವಿಷಯವಾಗಬೇಕು.
3. ಯೋಗ ಶಿಕ್ಷಣವು ದೈಹಿಕ ಶಿಕ್ಷಣದ ಭಾಗವಾಗಿದ್ದು, ಯೋಗ ಶಿಕ್ಷಣಕ್ಕೆ ಹೆಚ್ಚಿನಆದ್ಯತೆ ನೀಡುವುದು.
4. ಕಿರಿಯ ಪ್ರಾಥಮಿಕ ಶಿಕ್ಷಣದಲ್ಲಿ ಪ್ರಸ್ತುತ ದೈಹಿಕ ಶಿಕ್ಷಣವು ಅನೌಪಚಾರವಾಗಿ ನಡೆಯುತ್ತಿದ್ದು, ದೈಹಿಕ ಶಿಕ್ಷಕನಿಲ್ಲದ ಸಂದರ್ಭಗಳಲ್ಲಿ ಡಿ.ಇಡಿ ತರಬೇತಿ ಪಡೆದವರ್ಗ ಶಿಕ್ಷಕರೇ ದೈಹಿಕ ಶಿಕ್ಷಕರ ಕಾರ್ಯ ನಿರ್ವಹಿಸುತ್ತಿದ್ದಾರೆ. ಪ್ರತಿಯೊಂದು ಪ್ರಾಥಮಿಕ ಮತ್ತು ಪ್ರೌಢ ಶಾಲೆಯಲ್ಲಿ ದೈಹಿಕ ಶಿಕ್ಷಣವನ್ನು ಕಡ್ಡಾಯವಾಗಿ ಬೋಧನಾ ವಿಷಯವನ್ನಾಗಿ ಮಾಡಿ, ಕಡ್ಡಾಯವಾಗಿ ಅರ್ಹ ದೈಹಿಕ ಶಿಕ್ಷಣ ಶಿಕ್ಷಕರನ್ನು ನೇಮಕ ಮಾಡಬೇಕು. ವಿದ್ಯಾರ್ಥಿಗಳ ಸಂಖ್ಯೆ 500ಕ್ಕಿಂತ ಹೆಚ್ಚು ಇರುವ ಪ್ರೌಢ ಶಾಲೆಗಳಲ್ಲಿ ಹೆಚ್ಚುವರಿಯಾಗಿ ಒಬ್ಬರು ದೈಹಿಕ ಶಿಕ್ಷಣ ಶಿಕ್ಷಕರನ್ನು ನೇಮಕ ಮಾಡಬೇಕು.
5. 6 ರಿಂದ 9ನೇ ತರಗತಿ ವರೆಗೆ ದೈಹಿಕ ಶಿಕ್ಷಣದಲ್ಲಿ ಇತರೆ ವಿಷಯಗಳಂತೆ ಕಡ್ಡಾಯವಾಗಿ ಪರೀಕ್ಷೆ ನಡೆಸಿ, ಮೌಲ್ಯಮಾಪನದ ದಾಖಲೆಯನ್ನು ನಿರ್ವಹಿಸುವುದು.
6. ಎನ್.ಸಿ.ಎಫ್–2005 ರ ಚೌಕಟ್ಟಿನಲ್ಲಿ ಪ್ರಸ್ತುತ ದೈಹಿಕ ಶಿಕ್ಷಣದ ಪಠ್ಯಕ್ರಮ, ಪಠ್ಯವಸ್ತುಗಳ ಪರಿಷ್ಕರಣೆಯಾಗಬೇಕು. ಇವುಗಳ ಆಧಾರದ ಮೇರೆಗೆ ತರಗತಿವಾರು ಪಠ್ಯ ಪುಸ್ತಕಗಳು ಹಾಗೂ ಶಿಕ್ಷಕರ ಸಂಪನ್ಮೂಲ ಪುಸ್ತಕಗಳ ರಚನೆಯಾಗಬೇಕು.
7. ದೈಹಿಕ ಶಿಕ್ಷಣದಲ್ಲಿ ಕ್ರೀಡಾಂಗಣಗಳಲ್ಲಿ ನಡೆಯುವ ದೈಹಿಕ ಚಟುವಟಿಕೆಗಳಿಗೆ ತರಗತಿಯಲ್ಲಿ ನಡೆಯುವ ಮಾನಸಿಕ ಚಟುವಟಿಕೆಗಳಿಗಿಂತಲೂ ಹೆಚ್ಚಿನ ಆದ್ಯತೆ ಇರಬೇಕು.
8. ಪಠ್ಯ ವಿಷಯಗಳಲ್ಲಿರುವಂತೆಯೇ ದೈಹಿಕ ಶಿಕ್ಷಣ ವಿಷಯಕ್ಕೂ ಕಡ್ಡಾಯವಾಗಿ ಪರೀಕ್ಷೆ ನಡೆಸುವುದು. ತಾತ್ವಿಕ ವಿಷಯಗಳಿಗೆ ಶೇ 40 ಅಂಕಗಳು ಹಾಗೂ ಪ್ರಾಯೋಗಿಕ ಚಟುವಟಿಕೆಗಳಿಗೆ ಶೇ 60 ಅಂಕಗಳನ್ನು ನಿಗಧಿಗೊಳಿಸುವುದು.
9. ದೈಹಿಕ ಶಿಕ್ಷಣ ಶಿಕ್ಷಕರಿಗೆ ಪ್ರತ್ಯೇಕ ಕಾರ್ಯಸೂಚಿಯನ್ನು ರಚಿಸುವುದು.
10. ತರಬೇತಿಗಳು, ಕ್ರೀಡಾ ಶಿಬಿರಗಳು, ಯೋಗಾಸನ ಶಿಬಿರಗಳನ್ನು ಏರ್ಪಡಿಸುವುದರ ಮೂಲಕ ದೈಹಿಕ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸುವುದು.
11. ದೈಹಿಕ ಶಿಕ್ಷಣ ಶಿಕ್ಷಕರಿಗೆ ಪುನ:ಶ್ಚೇತನ ತರಬೇತಿಯನ್ನು ಇಲಾಖಾ ವತಿಯಿಂದ ಹಮ್ಮಿಕೊಳ್ಳುವುದು.
12. ಗುಣಮಟ್ಟ ಸುಧಾರಣೆಗೆ ಡಿ.ಎಸ್.ಇ.ಆರ್.ಟಿ. ಅಧೀನ ದೈಹಿಕ ಶಿಕ್ಷಣ ಘಟಕವನ್ನು ಸ್ಥಾಪಿಸುವುದು.
13. ದೈಹಿಕ ಶಿಕ್ಷಣ ಶಿಕ್ಷಕರುಗಳ ಪದನಾಮವನ್ನು 'ಸಹ ಶಿಕ್ಷಕರು' (ದೈಹಿಕ ಶಿಕ್ಷಣ) ಎಂದು ಪರಿಗಣಿಸಿ, ಸಹ ಶಿಕ್ಷಕರುಗಳಿಗೆ ದೊರೆಯುವ ಎಲ್ಲಾ ರೀತಿಯ ಸೌಲಭ್ಯಗಳನ್ನು ದೈಹಿಕ ಶಿಕ್ಷಣ ಶಿಕ್ಷಕರುಗಳಿಗೆ ನೀಡುವುದು.
14. ಈ ಸಂಬಂಧ, ದೈಹಿಕ ಶಿಕ್ಷಣ ಶಿಕ್ಷಕರಿಗೆ, ಆಡಳಿತ ಮತ್ತು ಶೈಕ್ಷಣಿಕ ತರಬೇತಿಯನ್ನು ಮೂರು ತಿಂಗಳ ಕಾಲಾವಧಿಗೆ ಇಲಾಖಾವತಿಯಿಂದ ಹಮ್ಮಿಕೊಳ್ಳುವುದು.

9. ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು–2005 ಹಾಗೂ ಪ್ರೋ.ಎಲ್.ಆರ್.ವೈದ್ಯನಾಥನ್ ಸಮಿತಿಯ ವರದಿಯ ಆಧಾರದ ಮೇರೆಗೆ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯು ಪ್ರಸ್ತುತ ಚಾಲ್ತಿಯಲ್ಲಿರುವ ದೈಹಿಕ ಹಾಗು ಆರೋಗ್ಯ ಶಿಕ್ಷಣದ ಪಠ್ಯವಸ್ತುವನ್ನು ಪರಿಷ್ಕರಿಸಿ, ಕರಡು ಪಠ್ಯವಸ್ತುವನ್ನು ತಯಾರಿಸಿ, ಹೊಸದಾಗಿ ರಚಿಸಿದ ನಿಯಮಾವಳಿಗಳನ್ನು ಹಾಗೂ

ಪಠ್ಯವಸ್ತುವಿನ ಕರಡನ್ನು ಮೇಲೆ ಓದಲಾದ ದಿನಾಂಕ 19–6–2007ರ ಪತ್ರದದೊಂದಿಗೆ ಕಳುಹಿಸಿ, ಸರ್ಕಾರದ ಅನುಮೋದನೆ ಕೋರಿರುತ್ತಾರೆ.

10. ಸರ್ಕಾರದ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು–2005 ಹಾಗು ಪ್ರೋ.ಎಲ್.ಆರ್.ವೈದ್ಯನಾಥನ್ ರವರ ವರದಿಯನ್ನು ಆಧರಿಸಿ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯು ರಚಿಸಿರುವ ಪಠ್ಯವಸ್ತುವನ್ನು ಸವಿಸ್ತಾರವಾಗಿ ಪರಿಶೀಲಿಸಿದೆ. ಈ ಪಠ್ಯ ಕ್ರಮಗಳನ್ನು 1 ರಿಂದ 5ನೇ ತರಗತಿ ಮತ್ತು 6–7 ನೇ ತರಗತಿ ಹಾಗೂ 8–10ನೇ ತರಗತಿಯಲ್ಲಿ ಅಳವಡಿಸಿಕೊಳ್ಳಲು ಅನುಮೋದನೆ ನೀಡಲು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 290 ಎಸ್‌ಎಲ್‌ಬಿ 2006, ಬೆಂಗಳೂರು, ದಿನಾಂಕ:06ನೇ ಆಗಸ್ಟ್ 2007**

11. ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಪ್ರೊ॥ ಎಲ್.ಆರ್.ವೈದ್ಯನಾಥನ್ ಸಮಿತಿಯ ಶಿಫಾರಸ್ಸಿನ ಆಧಾರದ ಮೇಲೆ ತಯಾರಿಸಿರುವ ದೈಹಿಕ ಮತ್ತು ಆರೋಗ್ಯ ಶಿಕ್ಷಣದ ಪಠ್ಯ ವಸ್ತುವನ್ನು 1 ರಿಂದ 5ನೇ ತರಗತಿ, 6 ಮತ್ತು 7 ನೇ ತರಗತಿ ಹಾಗೂ 8–10 ನೇ ತರಗತಿಯಲ್ಲಿ ಅಳವಡಿಸಿಕೊಳ್ಳಲು ಈ ಆದೇಶದ ಅನುಬಂಧ–ಐ, ಐಐ ಹಾಗೂ ಅನುಬಂಧ ಐಐಐ ರಲ್ಲಿರುವಂತೆ ಅನುಮೋದಿಸಲಾಗಿದೆ. ಈ ಪಠ್ಯ ವಸ್ತುವನ್ನು ಪೂರ್ವಸಿದ್ಧತೆಯೊಂದಿಗೆ ಮುಂದಿನ ಶೈಕ್ಷಣಿಕ ವರ್ಷದಿಂದ ಜಾರಿಗೊಳಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎನ್. ಸೋಮಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ

**ವಿಷಯ:** ಶಾಲಾ ಶಿಕ್ಷಣದಲ್ಲಿ ದೈಹಿಕ ಶಿಕ್ಷಣವನ್ನು ಕಡ್ಡಾಯಗೊಳಿಸಿ, ನಿಯಮಾವಳಿಗಳನ್ನು ಜಾರಿಗೊಳಿಸುವ ಬಗ್ಗೆ.

**ಹಿನ್ನೆಲೆ:**

ಶಿಕ್ಷಣ ಎಂದರೆ "ಮನುಷ್ಯನ ಸರ್ವತೋಮುಖ ಬೆಳವಣಿಗೆ. "A Sound Mind in a Sound Body" ಎನ್ನುವ ನಾಣ್ನುಡಿಯಂತೆ ಮಗುವಿನ ಸರ್ವಾಂಗೀಣ ಬೆಳವಣಿಗೆ ಮಾಡುಬುದೇ ಶಿಕ್ಷಣದ ಗುರಿ. ಶಾರೀರಕ, ಬೌದ್ಧಿಕ, ಸಾಮಾಜಿಕ, ನೈತಿಕ ವಿಕಾಸವನ್ನುಂಟು ಮಾಡುವಲ್ಲಿ ದೈಹಿಕ ಹಾಗೂ ಆರೋಗ್ಯ ಶಿಕ್ಷಣ ಮಹತ್ವದ ಪಾತ್ರವನ್ನು ವಹಿಸುತ್ತದೆ. ಆದ್ದರಿಂದಲೇ ದೈಹಿಕ ಶಿಕ್ಷಣ ಕ್ಷೇತ್ರವನ್ನು ಶಿಕ್ಷಣದ ಅವಿಭಾಜ್ಯ ಅಂಗ ಎಂದು ಹೇಳಬಹುದು.

ದೈಹಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ, ಹೊಸ ರಾಷ್ಟ್ರೀಯ ನೀತಿಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕೆ.ಪಿ. ಸಿಂಗ್‌ದೇವ್ ಸಮಿತಿಯ ಶಿಫಾರಸ್ಸುಗಳು ಗಮನಾರ್ಹವಾಗಿವೆ. 2001–02 ರಲ್ಲಿ ಶ್ರೀ ಬಿ.ಟಿ. ಪೆಮ್ಮಯ್ಯ, ನಿರ್ದೇಶಕರು (ಪ್ರೌಢ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ರಚನೆಯಾದ ಸಮಿತಿಯು ಕೆ.ಪಿ. ಸಿಂಗ್‌ದೇವ್ ಸಮಿತಿಯ ಶಿಫಾರಸ್ಸುಗಳನ್ನು ಕೂಲಂಕಷವಾಗಿ ಪರಾವರ್ತಿಸಿ, ಈ ಸಮಿತಿಯ ಶಿಫಾರಸ್ಸುಗಳನ್ನು ಸಮಗ್ರವಾಗಿ ಅನುಷ್ಠಾನಕ್ಕಾಗಿ ಮಾಡಿತು.

2003–04 ರಲ್ಲಿ ಶಿಕ್ಷಣ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ವಿಷಯ ಸಮಿತಿಯು ಮಾನ್ಯ ಶ್ರೀ ಬಿ.ಎಸ್. ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ ಶ್ರೀ ಬಿ.ಟಿ. ಪೆಮ್ಮಯ್ಯ ಸಮಿತಿಯ ಶಿಫಾರಸ್ಸುಗಳನ್ನು ಆಧಾರವಾಗಿಟ್ಟುಕೊಂಡು, ಶಾಲಾ ಕಾಲೇಜುಗಳಲ್ಲಿ ದೈಹಿಕ ಶಿಕ್ಷಣವನ್ನು ಕಡ್ಡಾಯ ವಿಷಯವನ್ನಾಗಿ ಮಾಡಲು ಶಿಫಾರಸ್ಸು ಮಾಡಿತು.

2004–05 ರಲ್ಲಿ ಕರ್ನಾಟಕ ಸರ್ಕಾರವು ತ್ರೈಮಾಸಿಕ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದಿತು. ಈ ಶಿಕ್ಷಣ ಪದ್ಧತಿಯಲ್ಲಿ ದೈಹಿಕ ಶಿಕ್ಷಣವನ್ನು ಸಹಪಠ್ಯದಲ್ಲಿ ಸೇರಿಸಿ, ಜೀವನ ವಿಜ್ಞಾನದ ಒಂದು ಭಾಗವನ್ನಾಗಿ ಪರಿಗಣಿಸಿ, ಯೋಗ ಶಿಕ್ಷಣಕ್ಕೆ ಹೆಚ್ಚು ಮಹತ್ವ ನೀಡಿದೆ.

**ಪ್ರಸ್ತಾವನೆ:**

ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು – 2005ರ ಹಿನ್ನೆಲೆಯಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ ದೈಹಿಕ ಶಿಕ್ಷಣದ ಪಠ್ಯವಸ್ತುವನ್ನು ಪರಿಷ್ಕರಿಸಬೇಕಾಗಿರುತ್ತದೆ. NCF – 2005 ನಲ್ಲಿ ದೈಹಿಕ ಶಿಕ್ಷಣಕ್ಕೆ ಹೆಚ್ಚು ಮಹತ್ವಕ್ಕೆ ನೀಡಲಾಗಿದೆ. "The Natinal Curriculum framework 2005 of NCERT has recommended that Physical Education should be considered on par with any other curriculum subjects, since these components are important for the oerall development of the child, hence, needs to be included in the curriculum. Further, it has suggested that Physical Education as core part of the curriculum: time allocated must not be reduced or taken away under any circumstances".

Further, the frame work has stated that the human resource dimension is critical for both Yoga and Physical Education. It is mandatory for all Educational Institutions to appoint trained and qualified teachers in health, yoga and physical educatin. The number of teachers in Physical Education should be proportionate to the number of student and these teachers should be fully at par with other regular subject teachers.

NCF - 2005 ನ್ನು ಆಧಾರವನ್ನಾಗಿಟ್ಟುಕೊಂಡು, ಈಗಿರುವ ದೈಹಿಕ ಶಿಕ್ಷಣದ ಚಟುವಟಿಕೆಗಳು, ಗುಣಮಟ್ಟ, ಕಾರ್ಯ ವಿಧಾನವನ್ನು ಪರಿಶೀಲಿಸಿ, ಸಮಗ್ರವಾದ ಕ್ರೀಡಾ ನೀತಿಯನ್ನು ರೂಪಿಸುವ ಸಲುವಾಗಿ, ಸರ್ಕಾರಿ ಆದೇಶ ಸಂಖ್ಯೆ: ಇಡಿ.145.ಯೋಯೋಕ.2006, ಬೆಂಗಳೂರು, ದಿನಾಂಕ: 27.6.2006 ರಲ್ಲಿ ಪ್ರೊ. ಎಲ್.ಆರ್. ವೈದ್ಯನಾಥನ್, ನಿವೃತ್ತ ಪ್ರಾಧ್ಯಾಪಕರು, ದೈಹಿಕ ಶಿಕ್ಷಣ ಮಹಾವಿದ್ಯಾಲಯ, ಬೆಂಗಳೂರು, ಇವರ ಅಧ್ಯಕ್ಷತೆಯಲ್ಲಿ ಒಂದು ತಜ್ಞರ ಸಮಿತಿಯನ್ನು

ರಚಿಸಿತು. ಈ ಸಮಿತಿಯು ರಾಜ್ಯದ ಶಾಲಾ ವ್ಯವಸ್ಥೆಯಲ್ಲಿ ಈಗಿರುವ ಸ್ಥಿತಿಗತಿಗಳ ಸಮಗ್ರ ಸಮೀಕ್ಷಾ ಅಧ್ಯಯನ ನಡೆಸಿ ತನ್ನ ವರದಿಯನ್ನು ಸಲ್ಲಿಸಿದೆ.

ಪ್ರೊ. ಎಲ್.ಆರ್. ವೈದ್ಯನಾಥನ್ ಅಧ್ಯಕ್ಷತೆಯಲ್ಲಿ ರಚಿಸಿದ ದೈಹಿಕ ಶಿಕ್ಷಣ ತಜ್ಞರ ಸಮಿತಿಯು ಸಲ್ಲಿಸಿರುವ ವರದಿಯನ್ನು ಕೂಲಂಕುಶವಾಗಿ ಪರಿಶೀಲಿಸಲು ಡಾ॥ ಆನಂದ ನಾಡಿಗೇರ, ಪ್ರಾಚಾರ್ಯರು, ಎಂ.ವಿ.ಎ.ಎಸ್. ಶ್ರೀ ಕೆ.ಜಿ. ನಾಡಿಗೇರ ದೈಹಿಕ ಶಿಕ್ಷಣ ಮಹಾವಿದ್ಯಾಲಯ, ಧಾರವಾಡ ಇವರ ಅಧ್ಯಕ್ಷತೆಯಲ್ಲಿ ರಚಿಸಿದ ಪಠ್ಯ ವಸ್ತು ರಚನಾ ಸಮಿತಿಯು ಈ ಕೆಳಗಿನಂತೆ ನೀತಿಗಳನ್ನು ರೂಪಿಸಿದೆ.

1. ಪ್ರಾಥಮಿಕ ಶಾಲಾ ಹಂತದಿಂದಲೇ ದೈಹಿಕ ಶಿಕ್ಷಣವು ಬೋಧನಾ ವಿಷಯವಾಗಿರಬೇಕು ಮತ್ತು ಪರೀಕ್ಷಾ ವಿಷಯವಾಗಿರಬೇಕು.
2. ದೈಹಿಕ ಶಿಕ್ಷಣವು ಇತರ ವಿಷಯಗಳಂತೆ ಪಠ್ಯ ವಿಷಯವಾಗಬೇಕು.
3. ಯೋಗ ಶಿಕ್ಷಣವು ದೈಹಿಕ ಶಿಕ್ಷಣದ ಭಾಗವಾಗಿದ್ದು, ಯೋಗ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡುವುದು.
4. ಕಿರಿಯ ಪ್ರಾಥಮಿಕ ಶಿಕ್ಷಣದಲ್ಲಿ ಪ್ರಸ್ತುತ ದೈಹಿಕ ಶಿಕ್ಷಣವು ಅನೌಪಚಾರವಾಗಿ ನಡೆಯುತ್ತಿದ್ದು, ದೈಹಿಕ ಶಿಕ್ಷಕನಿಲ್ಲದ ಸಂದರ್ಭಗಳಲ್ಲಿ ಡಿ.ಇಡಿ. ತರಬೇತಿ ಪಡೆದ ವರ್ಗ ಶಿಕ್ಷಕರೇ ದೈಹಿಕ ಶಿಕ್ಷಕರ ಕಾರ್ಯ ನಿರ್ವಹಿಸುತ್ತಿದ್ದಾರೆ. ಪ್ರತಿಯೊಂದು ಪ್ರಾಥಮಿಕ ಮತ್ತು ಪ್ರೌಢಶಾಲೆಯಲ್ಲಿ ದೈಹಿಕ ಶಿಕ್ಷಣವನ್ನು ಕಡ್ಡಾಯವಾಗಿ ಬೋಧನಾ ವಿಷಯವನ್ನಾಗಿ ಮಾಡಿ, ಕಡ್ಡಾಯವಾಗಿ ಅರ್ಹ ದೈಹಿಕ ಶಿಕ್ಷಣ ಶಿಕ್ಷಕರನ್ನು ನೇಮಕ ಮಾಡಬೇಕು. ವಿದ್ಯಾರ್ಥಿಗಳ ಸಂಖ್ಯೆ 500 ಕ್ಕಿಂತ ಹೆಚ್ಚು ಇರುವ ಪ್ರೌಢಶಾಲೆಗಳಲ್ಲಿ ಹೆಚ್ಚುವರಿಯಾಗಿ ಒಬ್ಬರು ದೈಹಿಕ ಶಿಕ್ಷಣ ಶಿಕ್ಷಕರನ್ನು ನೇಮಕ ಮಾಡಬೇಕು.
5. 6 ರಿಂದ 9ನೇ ತರಗತಿವರೆಗೆ ದೈಹಿಕ ಶಿಕ್ಷಣದಲ್ಲಿ ಇತರೆ ವಿಷಯಗಳಂತೆ ಕಡ್ಡಾಯವಾಗಿ ಪರೀಕ್ಷೆ ನಡೆಸಿ, ಮೌಲ್ಯಮಾಪನ ದಾಖಲೆಯನ್ನು ನಿರ್ವಹಿಸುವುದು.
6. ಎನ್.ಸಿ.ಎಫ್ – 2005ರ ಚೌಕಟ್ಟಿನಲ್ಲಿ ಪ್ರಸ್ತುತ ದೈಹಿಕ ಶಿಕ್ಷಣದ ಪಠ್ಯಕ್ರಮ, ಪಠ್ಯವಸ್ತುಗಳ ಪರಿಷ್ಕರಣೆಯಾಗಬೇಕು. ಇವುಗಳ ಆಧಾರದ ಮೇರೆಗೆ ತರಗತಿವಾರು ಪಠ್ಯ ಪುಸ್ತಕಗಳು ಹಾಗೂ ಶಿಕ್ಷಕರ ಸಂಪನ್ಮೂಲ ಪುಸ್ತಕಗಳ ರಚನೆಯಾಗಬೇಕು.
7. ದೈಹಿಕ ಶಿಕ್ಷಣದಲ್ಲಿ ಕ್ರೀಡಾಂಗಣಗಳಲ್ಲಿ ನಡೆಯುವ ದೈಹಿಕ ಚಟುವಟಿಕೆಗಳಿಗೆ ತರಗತಿಯಲ್ಲಿ ನಡೆಯುವ ಮಾನಸಿಕ ಚಟುವಟಿಕೆಗಳಿಗಿಂತಲೂ ಹೆಚ್ಚಿನ ಆದ್ಯತೆ ಇರಬೇಕು.
8. ಪಠ್ಯ ವಿಷಯಗಳಲ್ಲಿರುವಂತೆಯೇ ದೈಹಿಕ ಶಿಕ್ಷಣ ವಿಷಯಕ್ಕೂ ಕಡ್ಡಾಯವಾಗಿ ಪರೀಕ್ಷೆ ನಡೆಸುವುದು. ತಾತ್ವಿಕ ವಿಷಯಗಳಿಗೆ ಶೇ 40 ಅಂಕಗಳೂ ಹಾಗೂ ಪ್ರಾಯೋಗಿಕ ಚಟುವಟಿಕೆಗಳಿಗೆ ಶೇ 60 ಅಂಕಗಳನ್ನು ನಿಗಧಿಗೊಳಿಸುವುದು.
9. ದೈಹಿಕ ಶಿಕ್ಷಣ ಶಿಕ್ಷಕರಿಗೆ ಪ್ರತ್ಯೇಕ ಕಾರ್ಯಸೂಚಿಯನ್ನು ರಚಿಸುವುದು.
10. ತರಗತಿಗಳು, ಕ್ರೀಡಾ ಶಿಬಿರಗಳು, ಯೋಗಾಸನ ಶಿಬಿರಗಳನ್ನು ಏರ್ಪಡಿಸುವುದರ ಮೂಲಕ ದೈಹಿಕ ಶಿಕ್ಷಣದ ಗುಣಮಟ್ಟವನ್ನು ಹೆಚ್ಚುಸುವುದು.
11. ದೈಹಿಕ ಶಿಕ್ಷಣ ಶಿಕ್ಷಕರಿಗೆ ಪುನಃಶ್ಚೇತನ ತರಬೇತಿಯನ್ನು ಇಲಾಖಾ ವತಿಯಿಂದ ಹಮ್ಮಿಕೊಳ್ಳುವುದು.
12. ಗುಣಮಟ್ಟ ಸುಧಾರಣೆಗೆ ಡಿ.ಎಸ್.ಇ.ಆರ್.ಟಿ. ಅಧೀನ ದೈಹಿಕ ಶಿಕ್ಷಣ ಘಟಕವನ್ನು ಸ್ಥಾಪಿಸುವುದು.
13. ಸಹ ಶಿಕ್ಷಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ದೈಹಿಕ ಶಿಕ್ಷಣ ಶಿಕ್ಷಕರುಗಳಿಗೆ ನೀಡುವುದು.

**ದೈಹಿಕ ಶಿಕ್ಷಣ ಪಠ್ಯವಸ್ತು ಪರಿಷ್ಕರಣಾ ಸಮಿತಿ**

**ಅಧ್ಯಕ್ಷರು**

**ಡಾ॥ ಆನಂದ್ ನಾಡಗೀರ**

**ಪ್ರಾಚಾರ್ಯರು ಎಂ.ವಿ.ಎ.ಎಸ್. ಕೆ.ಜಿ. ನಾಡಗೀರ್ ದೈಹಿಕ ಶಿಕ್ಷಣ ಮಹಾವಿದ್ಯಾಲಯ ಧಾರವಾಡ**

**ಸದಸ್ಯರುಗಳು**

| | |
|---|---|
| **ಶ್ರೀ. ಹೆಚ್.ಬಿ ವಿರೂಪಾಕ್ಷ**<br>ದೈಹಿಕ ಶಿಕ್ಷಣ ಅಧೀಕ್ಷಕರು ಉಪನಿರ್ದೇಶಕರ ಕಛೇರಿ<br>ಬೆಂಗಳೂರು ನಗರ ದಕ್ಷಿಣಜಿಲ್ಲೆ | **ಶ್ರೀ ಗಂಗರಾಜಯ್ಯ ಎಂ.ಎಸ್**<br>ದೈಹಿಕ ಶಿಕ್ಷಣ ಅಧೀಕ್ಷಕರು ಉಪನಿರ್ದೇಶಕರ ಕಛೇರಿ<br>ಬೆಂಗಳೂರು ನಗರ ಉತ್ತರಜಿಲ್ಲೆ |
| **ಶ್ರೀ ಗಜಾನನ ಪ್ರಭು**<br>ಉಪನ್ಯಾಸಕರು ಪಿ.ಜಿ.ಡಿ. ಕುವೆಂಪು ವಿಶ್ವವಿದ್ಯಾಲಯ<br>ಶಿವಮೊಗ್ಗ | **ಶ್ರೀ ಎಂ.ಜೆ. ಅಂಗಡಿ**<br>ದೈಹಿಕ ಶಿಕ್ಷಣ ಶಿಕ್ಷಕರು ಸರ್ಕಾರಿ ಪ್ರೌಢಶಾಲೆ ಶೆಟ್ಟಿ<br>ಕ್ರೀಡಾಂಗಣ ಧಾರವಾಡ |
| **ಶ್ರೀ ಎಫ್. ಬಿ ಧರಿಯಣ್ಣನವರ್**<br>ದೈಹಿಕ ಶಿಕ್ಷಣ ಶಿಕ್ಷಕರು ಸರ್ಕಾರಿ ಉರ್ದು ಪ್ರೌಢಶಾಲೆ<br>ನರಗುಂದ ಗದಗ್ ಜಿಲ್ಲೆ | **ಶ್ರೀ ಶಿವಶಂಕರ್**<br>ದೈಹಿಕ ಶಿಕ್ಷಣ ಶಿಕ್ಷಕರು ಸರ್ಕಾರಿ ಪ್ರೌಢಶಾಲೆ<br>ಬಾಗೇಶಪುರ ಅರಸೀಕೆರೆ ತಾ ಹಾಸನ ಜಿಲ್ಲೆ |
| **ಶ್ರೀ ಅಶೋಕ್ ಬಿ. ಭಜಂತ್ರಿ**<br>ದೈಹಿಕ ಶಿಕ್ಷಣ ಶಿಕ್ಷಕರು ಶಾಸಕರ ಹಿರಿಯ ಮಾದರಿ ಶಾಲೆ<br>ನಂ 2 ಶಿರಸಿ , ಉತ್ತರಕನ್ನಡ ಜಿಲ್ಲೆ | **ಶ್ರೀ .ವಿ.ವೇಂಕಟೇಶ್**<br>ದೈಹಿಕ ಶಿಕ್ಷಣ ಶಿಕ್ಷಕರು ಮಾತಾ ಆಂಗ್ಲ ಪ್ರೌಢಶಾಲೆ<br>ಆರ್.ಟಿ.ನಗರ ಬೆಂಗಳೂರು |

| | |
|---|---|
| **ಶ್ರೀ ವೇಂಕಟರಾಜು**<br>ದೈಹಿಕ ಶಿಕ್ಷಣ ಶಿಕ್ಷಕರು ಒಕ್ಕಲಿಗರ ಸಂಘ ಪ್ರೌಢಶಾಲೆ<br>ಶ್ರೀ ಗಂಧದ ಕಾವಲ್ ಬೆಂಗಳೂರು ಉತ್ತರ | **ಸೈಯ್ಯದ್ ನಾಫಿಮ್ ಷಾ ಹುಸೇನಿ**<br>ದೈಹಿಕ ಶಿಕ್ಷಣ ಶಿಕ್ಷಕರು ಸರ್ಕಾರಿ ಪ್ರೌಢಶಾಲೆ<br>ಜಯನಗರ ಬೆಂಗಳೂರು |

**ಪರಿಶೀಲನೆಗಾರರು**

| | |
|---|---|
| **ಪ್ರೊ ಎಲ್.ಆರ್.ವೈದ್ಯನಾಥನ್,**<br>ನಿವೃತ್ತ ಡೀನ್ ಮತ್ತು ಪ್ರಾಚಾರ್ಯರು ದೈಹಿಕ ಶಿಕ್ಷಣ<br>ಮಹಾವಿದ್ಯಾಲಯ ಬೆಂಗಳೂರು ವಿಶ್ವವಿದ್ಯಾಲಯ<br>ಬೆಂಗಳೂರು | **ಪ್ರೊ ಎಂ ಚಂದ್ರಕುಮಾರ್**<br>ಛೇರ್‌ಮನ್ ದೈಹಿಕ ಶಿಕ್ಷಣ ಮತ್ತು ಕ್ರೀಡಾವಿಜ್ಞಾನ<br>ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾಲಯ<br>ಮೈಸೂರು |
| **ಡಾ॥ ಎಸ್.ಎಂ.ಪ್ರಕಾಶ್**<br>ನಿರ್ದೇಶಕರು ಮತ್ತು ಮುಖ್ಯಸ್ಥರು ದೈಹಿಕ ಶಿಕ್ಷಣ ವಿಭಾಗ<br>ಕುವೆಂಪು ವಿಶ್ವ ವಿದ್ಯಾಲಯ ಶಿವಮೊಗ್ಗ | |

**ಮೇಲ್ವಿಚಾರಣೆ ಮತ್ತು ಮಾರ್ಗದರ್ಶಕರು**

| | |
|---|---|
| **ಶ್ರೀ ವೇಂಕಟೇಶಯ್ಯ**<br>ಉಪನಿರ್ದೇಶಕರುಟಿ.ಇ.ವಿಭಾಗ<br>ಡಿ.ಎಸ್.ಇ.ಆರ್.ಟಿ.<br>ಬೆಂಗಳೂರು | **ಸತ್ಯನಾರಾಯಣ ರೆಡ್ಡಿ**<br>ನಿರ್ದೇಶಕರು<br>ಡಿ.ಎಸ್.ಇ.ಆರ್.ಟಿ.<br>ಬೆಂಗಳೂರು |

**ಸಂಯೋಜಕರು**

| | |
|---|---|
| **ಫ಼ಾಮಿದಾ ರಹೀಂ**<br>ಹಿರಿಯ ಸಹಾಯಕ ನಿರ್ದೇಶಕರು<br>ಡಿ.ಎಸ್.ಇ.ಆರ್.ಟಿ. ಬೆಂಗಳೂರು | **ಶ್ರೀಮತಿ ಟಿ.ಡಿ. ಮೀನಾಕುಮಾರಿ**<br>ಹಿರಿಯ ಸಹಾಯಕ ನಿರ್ದೇಶಕರು<br>ಕರ್ನಾಟಕ ಪಠ್ಯಪುಸ್ತಕ ಸಂಘ (ರಿ) ಬೆಂಗಳೂರು |

**ದೈಹಿಕ ಶಿಕ್ಷಣದ ಉದ್ದೇಶಗಳು**

- ❖ ವಿದ್ಯಾರ್ಥಿಗಳು ದೈಹಿಕವಾಗಿ ಬಲಶಾಲಿಗಳಾಗುವಂತೆ ಆರೋಗ್ಯವಾಗಿರುವಂತೆ ಮಾಡುವುದು. ಜೀವನದ ಎಲ್ಲ ಸನ್ನಿವೇಶಗಳನ್ನೂ ಸಮಾನವಾಗಿ ಎದುರಿಸಲು ಮಾನಸಿಕ ಹಾಗೂ ಭಾವನಾತ್ಮಕವಾಗಿ ಸಮರ್ಥರನ್ನಾಗಿಸುವುದು.
- ❖ ವಿದ್ಯಾರ್ಥಿಗಳ ಚಲನಾಸಾಮರ್ಥ್ಯ ಮತ್ತು ಚಲನ ಅರಿವುಗಳನ್ನು ಅಭಿವೃದ್ಧಿ ಪಡಿಸುವುದು.
- ❖ ವಿದ್ಯಾರ್ಥಿಗಳ ವಯೋಮಾನಕ್ಕೆ ತಕ್ಕಂತೆ ದೈಹಿಕ ದಾರ್ಢ್ಯತೆ ಮತ್ತು ಬೆಳವಣಿಗೆಯ ಅಭಿರುಚಿಯನ್ನು ವೃದ್ಧಿಸುವುದು.
- ❖ ವೈಯಕ್ತಿಕವಾಗಿ ಮತ್ತು ಸಾಮಾಜಿಕವಾಗಿ ಸಂತೋಷಕರ ಜೀವನ ನಡೆಸಲು ಮೂಲಭೂತ ಅಂಶಗಳನ್ನು ಅಭಿವೃದ್ಧಿ ಪಡಿಸುವುದು.
- ❖ ವಿದ್ಯಾರ್ಥಿಗಳಲ್ಲಿ ಸ್ಪರ್ಧಾ ಮನೋಭಾವ, ಏಕಾಗ್ರತಾ ಸಾಮರ್ಥ್ಯ ಮತ್ತು ನಾಯಕತ್ವದ ಗುಣಗಳನ್ನು ಬೆಳೆಸುವುದು.
- ❖ ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯ ಭಾವೈಕ್ಯತೆಯನ್ನು ಜಾಗೃತಗೊಳಿಸುವುದು.
- ❖ ವೈಯಕ್ತಿಕ ಸ್ವಚ್ಛತೆ ಶಾಲಾಪರಿಸರ ಸ್ವಚ್ಛತೆ ಹಾಗೂ ಸಮುದಾಯ ಸ್ವಚ್ಛತೆಯ ಬಗ್ಗೆ ಧನಾತ್ಮಕ ಗುಣಗಳನ್ನು ಬೆಳೆಸುವುದು.
- ❖ ಮಾನವನ ಚಟುವಟಿಕೆಗಳ ಮೂಲಭೂತ ಕ್ರಿಯೆಗೆ ಸಂಬಂಧಿಸಿದ ಕೌಶಲ್ಯಗಳನ್ನು ಮತ್ತು ಸೂಕ್ತವಾದ ಜ್ಞಾನವನ್ನು ಬೆಳೆಸುವುದು.
- ❖ ಸ್ವ ಅಭಿವ್ಯಕ್ತಿ ಸೃಜನಶೀಲತೆ ಮತ್ತು ಅಂತಃಸತ್ವಗಳ ಹೊರಹೊಮ್ಮಿಕೆಗೆ ಅವಕಾಶ ಕಲ್ಪಿಸುವುದು.
- ❖ ವಿದ್ಯಾರ್ಥಿಗಳಲ್ಲಿ ದೈಹಿಕ ನಿಲುವು–ಭಂಗಿಯ ನ್ಯೂನತೆಯನ್ನು ಪರಿಚಯಿಸುವುದು ಹಾಗೂ ನ್ಯೂನತೆಗಳಿಗೆ ದೈಹಿಕ ಚಟುವಟಿಕೆಗಳ ಮೂಲಕ ಪರಿಹಾರ ಸೂಚಿಸುವುದು.
- ❖ ಜೀವನ ಶೈಲಿ ಸೂಕ್ತ ಆಹಾರ ಪದ್ಧತಿ, ವಿರಾಮ ವಿಶ್ರಾಂತಿ ಮತ್ತು ಬಿಡುವಿನ ವೇಳೆಯ ಸದುಪಯೋಗದ ಅಭ್ಯಾಸಗಳನ್ನು ರೂಢಿಸುವುದು.
- ❖ ಸಾಮಾನ್ಯ ಸಾಂಕ್ರಾಮಿಕ ರೋಗಗಳ ಕಾರಣ, ಲಕ್ಷಣಗಳು ಚಿಕಿತ್ಸಕ ಕ್ರಮಗಳು ಮತ್ತು ಪ್ರತಿಬಂಧಕ ಕ್ರಮಗಳ ಬಗ್ಗೆ ಅರಿವು ಮೂಡಿಸುವುದು.

- ❖ ಯೋಗ ಪ್ರಾಣಾಯಾಂ ಧ್ಯಾನ ಮುಂತಾದ ಯೋಗಿಕ ಚಟುವಟಿಕೆಗಳ ಮೂಲಕ ವಿದ್ಯಾರ್ಥಿಗಳ ಏಕಾಗ್ರತೆ ಹೆಚ್ಚಿಸಿ ಕಲಿಕೆಯ ಪ್ರಗತಿಗೆ ಪೂರಕ ವಾತಾವರಣ ನಿರ್ಮಿಸುವುದು ಮತ್ತು ಈ ಮೂಲಕ ಶಾಂತ ಹಾಗೂ ಸೌಹಾರ್ದಯುತ ಸಮಾಜದ ನಿರ್ಮಾಣಕ್ಕೆ ನಾಂದಿ ಹಾಡುವುದು.
- ❖ ಕ್ರೀಡಾಸ್ಪರ್ಧೆಗಳಲ್ಲಿ ಹಿರಿಮೆಯ ಮತ್ತು ಪ್ರಶಂಸೆಯ ಗುಣಗಳನ್ನು ವೃದ್ಧಿಸುವುದು.
- ❖ ನಾಗರಿಕ ಸಮಾಜದ ಮೌಲ್ಯಗಳು ಮತ್ತು ಸಹಿಷ್ಣುತಾ ಗುಣಗಳನ್ನು ಪ್ರೇರೇಪಿಸುವುದು.
- ❖ ದೈಹಿಕ ಶಿಕ್ಷಣದ ಮುಖಾಂತರ ವಿದ್ಯಾರ್ಥಿಗಳಲ್ಲಿ ಆರೋಗ್ಯ ದೃಢತೆ ಮತ್ತು ಸಮಚಿತ್ತತೆಯನ್ನು (Health Fitness, Wellness) ಅಭಿವೃದ್ಧಿಪಡಿಸುವುದು.

**ದೈಹಿಕ ಮತ್ತು ಆರೋಗ್ಯ ಶಿಕ್ಷಣಕ್ಕೆ 1 ವಾರಕ್ಕೆ ಲಭ್ಯವಿರುವ ತರಗತಿವಾರು ಅವಧಿಗಳ ಸಂಖ್ಯೆ**

| ಕ್ರ. ಸಂ. | ತರಗತಿ | ಅವಧಿಗಳು |
|---|---|---|
| 1 | 1ನೇ ತರಗತಿ | 5 |
| 2 | 2ನೇ ತರಗತಿ | 5 |
| 3 | 3ನೇ ತರಗತಿ | 5 |
| 4 | 4ನೇ ತರಗತಿ | 5 |
| 5 | 5ನೇ ತರಗತಿ | 5 |
| 6 | 6ನೇ ತರಗತಿ | 3 |
| 7 | 7ನೇ ತರಗತಿ | 3 |
| 8 | 8ನೇ ತರಗತಿ | 4 |
| 9 | 9ನೇ ತರಗತಿ | 4 |
| 10 | 10ನೇ ತರಗತಿ | 4 |

**ಅನುಬಂಧ - I**

**1 ರಿಂದ 5ನೇ ತರಗತಿ**

**1 ರಿಂದ 5ನೇ ತರಗತಿಯ ಚಟುವಟಿಕೆಗಳ ಅವಧಿ/ಹಂಚಿಕೆ**

| ಕ್ರ. ಸಂ. | ಕಲಿಕಾಂಶ/ಚಟುವಟಿಕೆ | ತರಗತಿವಾರು ಅವಧಿ / ಹಂಚಿಕೆ | | | | |
|---|---|---|---|---|---|---|
| | | 1 | 2 | 3 | 4 | 5 |
| 1 | ಸ್ವತಂತ್ರ ಚಲನಾ ಚಟುವಟಿಕೆಗಳು | 20 | 20 | 20 | 20 | 10 |
| 2 | ಅನುಸರಣಾ ಚಟುವಟಿಕೆಗಳು | 25 | 25 | 25 | 25 | 20 |
| 3 | ತಾಳಬದ್ಧ ಚಟುವಟಿಕೆಗಳು<br>(ಅಭಿನಯ ಉಪಕರಣ ಚಟುವಟಿಕೆಗಳು) | 25 | 25 | 25 | 25 | 30 |
| 4 | ಮನರಂಜನೆ ಚಟುವಟಿಕೆಗಳು | 30 | 30 | 30 | 30 | 20 |
| 5 | ಸರಳ ದೈಹಿಕ ವ್ಯಾಯಾಮ | 15 | 15 | 15 | 15 | 15 |
| 6 | ಸುಲಭ ಹೋರಾಟ ಚಟುವಟಿಕೆಗಳು | 10 | 10 | 10 | 10 | 10 |
| 7 | ಆರೋಗ್ಯ ಶಿಕ್ಷಣ/ಜೀವನ ಕಲೆ | 20 | 20 | 20 | 20 | 15 |
| 8 | ಸರಳ ಆಟೋಟಗಳು | 10 | 10 | 10 | 10 | 10 |
| 9 | ಮೌಲ್ಯಮಾಪನ | 10 | 10 | 10 | 10 | 10 |
| **ಒಂದು ಶೈಕ್ಷಣಿಕ ವರ್ಷದಲ್ಲಿ ಲಭ್ಯವಿರುವ ಒಟ್ಟು ಅವಧಿಗಳು** | | **165** | **165** | **165** | **165** | **140** |

| ತರಗತಿವಾರು ದೈಹಿಕ ಶಿಕ್ಷಣ ಮತ್ತು ಆರೋಗ್ಯ ಶಿಕ್ಷಣ ಪಠ್ಯವಸ್ತು (ತರಗತಿ - 1) | | | | |
|---|---|---|---|---|
| | **ಸಾಮರ್ಥ್ಯ / ಉಪಸಾಮರ್ಥ್ಯ** | | **ವಿಷಯ ಮತ್ತು ಚಟುವಟಿಕೆ** | **ಮಾರ್ಗೋಪಾಯ / ಚಟುವಟಿಕೆ** |
| | | | **ದೈಹಿಕ ಶಿಕ್ಷಣ** | |
| 1. | ದೈಹಿಕವಾಗಿ ಹಾಗೂ ಮಾನಸಿಕವಾಗಿ ಸರಿಯಾದ ರೀತಿಯಲ್ಲಿ ಸದೃಢವಾಗಿ ಬೆಳೆಯುವಂತೆ ಅಭಿವೃದ್ಧಿ ಮಾಡುವುದು. | 1.<br>ಅ) | ಅನೌಪಚಾರಿಕ ಚಟುವಟಿಕೆಗಳು<br>- ಸ್ವತಂತ್ರ ಚಲನೆಗಳು - ಸ್ವತಂತ್ರ ಓಟ ಸಂಜ್ಞೆ ನೀಡಿದಾಗ ಒಬ್ಬನೇ ಒಂದು ಸ್ಥಳವನ್ನು ಹಿಡಿಯುವುದು. ಸ್ವತಂತ್ರವಾಗಿ ಕುಪ್ಪಳಿಯುವುದು - ಸಂಜ್ಞೆ ನೀಡಿದಾಗ ಅಡ್ಡಸಾಲುಗಟ್ಟುವುದು ಉಸಾದ್ದಸಾಲುಗಟ್ಟುವುದು ಅಥವಾ ವೃತ್ತಾಕಾರವಾಗಿ ನಿಲ್ಲುವುದು (ಸಂಜ್ಞೆಗಾಗಿ ಸೀಟಿಯನ್ನು ಬಳಸಬಹುದು ಅಥವಾ ಚಪ್ಪಾಳೆ ತಟ್ಟಬಹುದು). | ಮೊದಲು ಪ್ರದರ್ಶಿಸಿ ನಂತರ ಮಕ್ಕಳು ಅನುಕರಣೆ ಮಾಡುವಂತೆ ತಿಳಿಸಿ ಸಂಜ್ಞೆಗಾಗಿ ಅನುಕರಣೆ ಮಾಡುವಂತೆ ತಿಳಿಸಿ ಸಂಜ್ಞೆಗಾಗಿ ಸೀಟಿಯನ್ನು ಉಪಯೋಗಿಸಿ ಅಥವಾ ಚಪ್ಪಾಳೆ ತಟ್ಟಿ ಕಟ್ಟು ನಿಟ್ಟಾಗಿ ಹೀಗಿಯೇ ಮಾಡಬೇಕೆಂದು ಒತ್ತಾಯಿಸಬಾರದು. |
| 1.1 | ಸಹಜ ಪ್ರೇರಣೆಯೊಂದಿಗೆ ಕೈ ಕಾಲುಗಳಿಗೆ ಮತ್ತು ಮುಂಡಕ್ಕೆ ವ್ಯಾಯಾಮ ನೀಡುವುದು. | | | |
| 1.2 | ಆಟದ ವಿಧಾನದ ಮೂಲಕ ಕೈಗಳ ಕಾಲ್ಗಳ ಮತ್ತು ಮುಂಡದ ಭಾಗಗಳ ಚಲನೆಗಳಲ್ಲಿ ನರ-ಸ್ನಾಯುಗಳ ಸಮನ್ವಯಗೊಳಿಸುವುದು. | | ಕಾಳಿನ ಚೀಲಗಳನ್ನು ಆರಿಸುವುದು. ಸಂಜ್ಞೆ ನೀಡಿದೊಡನೆಯೇ ದೊಡ್ಡ ವೃತ್ತದ ಸುತ್ತ ಓಡುತ್ತಿರುವುದು ಮತ್ತು ಸಂಜ್ಞೆ ನೀಡಿದೊಡನೆ ವೃತ್ತದಲ್ಲಿ ಚೆಲ್ಲಾಪಿಲ್ಲಿಯಾಗಿ ಚೆಲ್ಲಿರುವ ಹುರುಳಿ ಬೀಜದ ಚೀಲಗಳನ್ನು ಆರಿಸುವುದು (ವೃತ್ತದಲ್ಲಿಯೇ ಮಕ್ಕಳು ಚದುರಿರಬೇಕು)<br>ಬ) ಉಪಕರಣ ಆಟಗಳು<br>(1) ಉಯ್ಯಾಲೆ, (2) ನೆಲಕ್ಕೆ ಸಮಾಂತರವಾಗಿರುವ ಮತ್ತು ಹತ್ತುವ ಏಣಿಗಳು, (3) ಮರಳಿನ ಚೀಲ, (4) ಜಂಗ್ಲ್‌ಜಿಮ್ (5) ತೂಗುತೊಲೆ (See Saw), (6) ಇಳಿಜಾರು ಹಲಗೆ ಮತ್ತು (7) ಸ್ಥಳೀಯವಾಗಿ ಪರಿಚಿತವಿರುವ ಇಂತಹ ಯಾವುದೇ ಚಟುವಟಿಕೆಗಳು | |
| 1.3 | ಪರಿಸರದಲ್ಲಿ ಕಂಡುಬರುವ ಚಲನೆಗಳನ್ನು ಅನುಕರಣೆ ಮಾಡುವುದರ ಮೂಲಕ ಅಪೇಕ್ಷಿತ | ಕ) | ಪ್ರಾಣಿಗಳ ಪಕ್ಷಿಗಳ ಮತ್ತು ಇತರೆ ಚಲನೆಗಳು ಮತ್ತು ಕೂಗುಗಳು (ಸಪ್ಪಳ), ಕುದುರೆಯ ನಾಗಾಲೋಟ ಕಾಗೆಯ ಹಾರಾಟ ಕಪ್ಪೆಯ ಕುಪ್ಪಳಿಸುವಿಕೆ, ಬಾತಿನ ನಡಿಗೆ, ರೈಲುಗಳು ಎತ್ತಿನ ಗಾಡಿ, ಟಾಂಗ. | ಒಂದು ವೇಳೆ ಈ ಉಪಕರಣಗಳು ದೊರೆಯದಿದ್ದರೆ ಇದ್ದವುಗಳನ್ನೇ ಸುಧಾರಿಸಿಕೊಳ್ಳಬಹುದು. |

| | **ಸಾಮರ್ಥ್ಯ / ಉಪಸಾಮರ್ಥ್ಯ** | **ವಿಷಯ ಮತ್ತು ಚಟುವಟಿಕೆ** | **ಮಾರ್ಗೋಪಾಯ / ಚಟುವಟಿಕೆ** |
|---|---|---|---|
| | ವಿನ್ಯಾಸಗಳಲ್ಲಿ ದೇಹದ ಚಲನೆಗಳನ್ನು ನಿಯಂತ್ರಿಸುವುದು | ಕುಂಬಾರ, ಅಗಸ, ಮರ ಕಡಿಯುವವನು, ಮರಗೆಲಸದವನು. ಕುಂಬಾರ ರೈತ ಗಾರೆ ಕೆಲಸದವನು. ಎಲೆಗಳು ಬೀಳುವಿಕೆ, ಗಾಳಿ ಬೀಸುವಿಕೆ, ಅಲೆಗಳು, ಮರಗಳ ಕೊಂಬೆಗಳು ಕಾಡನ್ನು ದಾಡುವುದು. ನದಿ ಹೊಳೆಗಳನ್ನು ದಾಟುವುದು ಇತ್ಯಾದಿ. | ಉದಾ: ಮರಕ್ಕೆ ಹಗ್ಗ ಕಟ್ಟಿ ಉಯ್ಯಾಲೆ ಆಡಿಸುವುದು. ರೆಂಬೆಗಳನ್ನು ಜಂಗ್ಸ್ ಜಿಮ್‌ಗೆ ಉಪಯೋಗಿಸುವುದು ಇತ್ಯಾದಿ ಪ್ರದರ್ಶಿಸಬೇಕು. |
| 1.4 | ಔಪಚಾರಿಕ ವ್ಯಾಯಾಮಗಳ ಮೂಲಕ ಕೈಕಾಲುಗಳಿಗೆ ವ್ಯಾಯಾಮ ನೀಡುವುದು/ | ಔಪಚಾರಿಕ ಚಟುವಟಿಕೆಗಳು. | ಪ್ರದರ್ಶಿಸಿ: ಒಬ್ಬ ನಾಯಕನನ್ನು ಆರಿಸಿ ಮಕ್ಕಳು ಅನುಕರಿಸುವರು. |
| | | I. **ಅಭ್ಯಾಸ - 1**<br>ಕೈಗಳಿಗೆ: (ಒಂದು ಪಾದವನ್ನು ಮುಂದಕ್ಕೆ) ಆಜ್ಞೆ ಕೊಟ್ಟ ಕೂಡಲಿ, ಒಂದು ಕೈಯನ್ನು ಹಿಂದಕ್ಕೂ ಮುಂದಕ್ಕೂ ವೃತ್ತಾಕಾರವಾಗಿ ಆಡಿಸುವುದು.<br>ಸೊಂಟಕ್ಕೆ: ದೈತ್ಯನಂತೆ ಎತ್ತರವಾಗುವುದು ಕುಳ್ಳನಂತೆ ಗಿಡ್ಡನಾಗುವುದು.<br>ಕಾಲುಗಳಿಗೆ: ಮೊಣಕಾಲುಗಳನ್ನು ಎತ್ತರಕ್ಕೆ ಎತ್ತುತ್ತ ನಿಂತ ಸ್ಥಳದಲ್ಲಿಯೇ ಓಡುವುದು.<br>ಸಮತೋಲನ: ಕಾಲುಗಳನ್ನು ಸ್ವತಂತ್ರವಾಗಿ ಮುಂದಕ್ಕೆ ಅಥವಾ ಪಕ್ಕಕ್ಕೆ ಮತ್ತು ಮೇಲಕ್ಕೆ ತೂಗಾಡಿಸುವುದು (ಆಗ ಪೂರ್ಣ ಶರೀರದ ಭಾರ ಒಂದು ಕಾಲಿನ ಮೇಲೆ ಇರುತ್ತದೆ) | |
| | | **ಅಭ್ಯಾಸ -2**<br>ಕೈಗಳಿಗೆ: ಮೋಟಾರು ಕಾರನ್ನು ಪ್ರಾರಂಭಿಸುವುದು (ಸ್ಟಾರ್ಟರ್ ಅಥವಾ ಕೈಹಿಡಿಯನ್ನು ಹಿಡಿಯುತ್ತಿರುವಂತೆ ಕೈಯನ್ನು ಮಾಡಿರಿ) ಒಂದು | ಮೇಲಿನಂತೆ |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | | ಮಾರ್ಗೋಪಾಯ / ಚಟುವಟಿಕೆ |
|---|---|---|---|
| ವಿನ್ಯಾಸಗಳಲ್ಲಿ ದೇಹದ ಚಲನೆಗಳನ್ನು ನಿಯಂತ್ರಿಸುವುದು | ಕೈಯಿಂದ ಅಥವಾ ಎರಡೂ ಕೈಗಳಿಂದ (ವಾಹನವನ್ನು ಎಡಕ್ಕೆ ಬಲಕ್ಕೆ ತಿರುತಿಸುತ್ತಿರುವಂತೆ ತಿರುಗಿಸಿ | | ವಿವರ ಹಾಗೂ ಪ್ರದರ್ಶನದ ಮೂಲಕ |
| | ಸೊಂಟಕ್ಕೆ: | ಹೂವಿನ ಮೊಗ್ಗು ಅರಳುವಂತೆ ಅರಳುವುದು ಮೊಣಕಾಲುಗಳನ್ನು ಅಪ್ಪಿಕೊಂಡು ಕುಳಿತುಕೊಳ್ಳುವುದು, ಮೊಣಕಾಲುಗಳನ್ನು ಮುಂದಕ್ಕೆ ಚಾಚುವುದು, ಸೊಂಟವನ್ನು ಹಿಂದಕ್ಕೆ ಬಾಗಿಸುವುದು ಮತ್ತು ಕೈಗಳನ್ನು ಮೇಲಕ್ಕೆ ಎತ್ತುವುದು. (ವಿಮಾನದ ವಾಲುವಿಕೆಯನ್ನು Banking- ಮತ್ತು ತಿರುಗುವಿಕೆಯನ್ನು ಸೂಚಿಸುವಂತೆ ಸ್ವತಂತ್ರವಾಗಿ ಹಿಂತಿರುಗಿ ಓಡುವುದು). | ವಿವರ ಹಾಗೂ ಪ್ರದರ್ಶನದ ಮೂಲಕ |
| | ಕಾಲುಗಳಿಗೆ: | ಸೈಕಲನ್ನು ನಡೆಸುವಂತೆ ಸುತ್ತಕಾಲುಗಳನ್ನು ಚಲಿಸಿ ಸವಾರನಂತೆ ನಟಿಸುವುದು. | |
| | **ಅಭ್ಯಾಸ - 3** | | ಮೇಲಿನಂತೆ |
| | ಕೈಗಳಿಗೆ | (ಮುಂಭಾಗದಲ್ಲಿ ಆಧಾರದೊಂದಿಗೆ) ಕೈಗಳ ಮೇಲೆ ಮುಂದಕ್ಕೆ ಮತ್ತು ಹಿಂದಕ್ಕೆ ನಡೆಯುವುದು ನೆಲದ ಮೇಲೆ ಗೊತ್ತಾದ ಸ್ಥಳದಲ್ಲಿ ಪಾದಗಳನ್ನು ಊರಬೇಕು. | |
| | ಸೊಂಟಕ್ಕೆ: | (ಕಾಲು ಹಿಗ್ಗಲಿಸಿಕೊಂಡು) ಹುರುಳಿ ಬೀಜದ ಚೀಲವನ್ನು ಎರಡೂ ಕೈಗಳಿಂದ ತಲೆಯ ಮೇಲೆ ಎತ್ತರಕ್ಕೆ ಎತ್ತುವುದು ಮತ್ತು ಮಂಡಿಗಳನ್ನು ಬಾಗಿಸದೆ ಹಿಂದಕ್ಕೆ ತರುವುದು ಮತ್ತು ಅದನ್ನು ನೋಡುವುದು ಅದು ಹಿಂದೆ ಬೀಳದಂತೆ ಕೈಗಳನ್ನು | |

| ಸಾಮರ್ಥ್ಯ / ಉಪಸಾಮರ್ಥ್ಯ | | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|---|
| | | ಬಿಡುವುದು (ತೋಳುಗಳು ನೇರವಾಗಿರಬೇಕು). ಕೆಳಕ್ಕೆ ಬಗ್ಗಿ ಕಾಲುಗಳ ಮೂಲಕ ಕೈತೂರಿಸಿ ಅದನ್ನು ಎತ್ತಿಕೊಳ್ಳುವುದು (ಎಡ ಬಲ ಪಕ್ಕಗಳಿಗೆ ಬಾಗಿ ಅದೇ ರೀತಿ ಮಾಡುವುದು)<br>II ಮೇಲಾಟಗಳು (Athletics)-ಇಲ್ಲ<br>III ಸರ್ವಾಂಗ ಸುಂದರ ವ್ಯಾಯಾಮ (Callisthenics)-ಇಲ್ಲ | |
| 1.4 | ಔಪಚಾರಿಕ ವ್ಯಾಯಾಮಗಳ ಮೂಲಕ ಕೈಕಾಲುಗಳಿಗೆ ವ್ಯಾಯಾಮ ನೀಡುವುದು | IV ಆಟಗಳು<br><br>ಅ) ಸುಲಭ ಆಟಗಳು | ಆಟದ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಿ ಕೆಲವರನ್ನು ಆಡುವಂತೆ ಮಾಡುವುದು. |
| 2) | ಆಟಗಳ ಮೂಲಕ ಸಾಮಾಜಿಕ ಮತ್ತು ದೈಹಿಕ ಬೆಳವಣಿಗೆಯನ್ನು ಸಾಧಿಸುವುದು. | 1) ಸಾಮಾನ್ಯ (ಸರಳ) ಮುಟ್ಟಾಟ, 2) ಬೆಕ್ಕು ಮತ್ತು ಇಲಿ, 3) ನೆರಳು ಬಿಸಿಲು, 4) ಸಂಖ್ಯೆ ಬದಲಾವಣೆ, 5) ಕರವಸ್ತ್ರವನ್ನು ಹಾಕುವುದು. 6) ಊಟಕ್ಕಾಗಿ ಓಡುವುದು, 7) ಬಚ್ಚಿಟ್ಟುಕೊಳ್ಳುವುದು ಮತ್ತು ಹುಡುಕುವುದು (ಒಬ್ಬ ಹುಡುಕುವವನು), 8) ಅರ್ಧ ಕುಳಿತು ಆಡುವ | ಆಟ ನಡೆದಿರುವಾಗ ತಪ್ಪುಗಳನ್ನು ಮಾಡಿದಾಗ ಅಲ್ಲಿಯೇ ತಿದ್ದಿ ಸರಿಪಡಿಸಬೇಕು. |
| 2.1 | ಸ್ಪರ್ಧಾಮನೋಭಾವ, ಸಂಘ ಭಾ'ವ ವಿಶ್ವಾಸ, ಭಾವನಾತ್ಮಕ ಸ್ಥಿರತೆಗಳನ್ನು ವಿವಿಧ ಆಟಗಳಲ್ಲಿ ಭಾಗವಹಿಸುವುದರ ಮೂಲಕ ಬೆಳೆಸುವುದು. | ಮುಟ್ಟಾಟ (Squat tag) ಮತ್ತು ಸ್ಥಳೀಯವಾಗಿ ಪ್ರಚಾರದಲ್ಲಿರುವ ಇಂತಹ ಇತರ ಆಟಗಳು.<br><br>ಬ) ಪೂರಕ ಆಟಗಳು (Lead up games) ಚೆಂಡನ್ನು ಉರುಳಿಸುವುದು. ಪುಟಿಸುವುದು. ಹಿಡಿಯುವುದು ಮತ್ತು ಎಸೆಯುವುದು. | |
| 2.2 | ಮನೋರಂಜಕ ಚಟುವಟಿಕೆಗಳ ಮೂಲಕ ಗುಂಪು ಭಾವನೆ, ಸೌಂದರ್ಯ ಪ್ರಜ್ಞೆ, ಭಾಗವಹಿಸುವಿಕೆಯಲ್ಲಿ ಆನಂದಪಡುವುದು ವಿರಾಮ ಮುಂತಾದವುಗಳನ್ನು ಅಭಿವೃದ್ಧಿಪಡಿಸುವುದು. | V ಮನೋರಂಜಕ ಚಟುವಟಿಕೆಗಳು<br>ವೈಯಕ್ತಿಕ<br>1. ಕೈಗಳಿಂದ ಚಪ್ಪಾಳೆ ಹಾಕುತ್ತ ಲಯಬದ್ಧವಾಗಿ ಹೆಜ್ಜೆ ಹಾಕುವುದು | ಪ್ರದರ್ಶಿಸುವುದು ಮತ್ತು ಅನುಕರಣೆಗೆ ಮಾಡುವಂತೆ ತಿಳಿಸುವುದು. |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|
| ನರಗಳ ಮತ್ತು ಸ್ನಾಯುಗಳ ಹೊಂದಾಣಿಕೆಯಾಗುತ್ತದೆ. | 2. ಚಪ್ಪಾಳೆ ಹಾಕುತ್ತ ಮತ್ತು ಚಪ್ಪಾಳೆ ಹಾಕದ ಲಯಬದ್ಧವಾಗಿ ಓಡುವುದು.<br>3. ಚಪ್ಪಾಳೆ ಹಾಕುತ್ತ ಚಪ್ಪಾಳೆ ಹಾಕದೆ ಲಯಬದ್ಧವಾಗಿ ಕುಪ್ಪಳಿಸುವುದು.<br>4. ಚಪ್ಪಾಳೆ ಹಾಕುತ್ತ ಅಥವಾ ಚಪ್ಪಾಳೆ ಹಾಕದೆ ಜಿಗಿಯುವುದು ಪಕ್ಕಕ್ಕೆ ಜರುಗುವ ಚಲನೆಗಳೊಂದಿಗೆ ಸಹ ಈ ಚಟುವಟಿಕೆಗಳನ್ನು ನಡೆಸಲು ಪ್ರಯತ್ನಿಸಬಹುದು.<br>**ಗುಂಪಿನ ಚಟುವಟಿಕೆಗಳು** | |
| ಮನಸ್ಸಿಗೆ ಹರ್ಷದಾಯಕ ಮತ್ತು ಆನಂದದಾಯಕವಾಗುತ್ತದೆ. | **ಅಭಿನಯ ಗೀತೆಗಳು**<br>ಬಾಕಿಟ್ಟು ಬಾ. ಸಿಕಾರ ಕರುಣ ಅಪ್ಪವಾಗಾಚಿ, ಕೈವೀಸಮ್ಮ ಕೈ ವೀಸು, ಪಾನಿ ಆಯಾ ದೊಂಡೊ ದೊಂಡೋ. ರಿಂಗ್ ಎ ರೌಂಡ್ ನಂತಹ ಗೀತೆಗಳು ಮತ್ತು ಸ್ಥಳೀಯವಾಗಿ ಪ್ರಚಲಿತವಿರುವ ಇಂತಹ ಇತರ ಗೀತೆಗಳು ಮತ್ತು ಪದ್ಯಗಳು. | ಶಿಕ್ಷಕರು ಹಾಡಬೇಕು. ಮಕ್ಕಳೂ ಅದರಂತೆ ಹಾಡಬೇಕು. ಹಾಡುಗಳನ್ನು ಹಾಡುವಾಗ ಮತ್ತು ಕತೆಗಳನ್ನು ಹೇಳುವಾಗ ಎಷ್ಟುಸಾಧ್ಯವೋ ಅಷ್ಟು ಅಭಿನಯ ಮಾಡಿ ತೋರಿಸಬೇಕು. |
| | ಕಥಾಭಿನಯಗಳು<br>ಇತರ ವಿಷಯಗಳಲ್ಲಿ ಕಲಿತ ಕತೆಗಳು ಅದರಲ್ಲೂ ಪ್ರಾಣಿಗಳ ಪಾತ್ರರಗಳಿರುವ ಕತೆಗಳಿಗೆ ಪ್ರಾಧಾನ್ಯತೆಯಿರಲಿ.<br>ರಾಷ್ಟ್ರೀಯ ಸಮಗ್ರತೆಗೆ ಸಂಬಂಧಿಸಿದ ಇತರ ಸಾಮೂಹಿಕ ಗೀತೆಗಳು. | ಕಥೆಯನ್ನು ಹೇಳುವುದು ಹಾಡನ್ನು ಹಾಡಿಸುವುದು. |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|
| | **ಆರೋಗ್ಯ ಶಿಕ್ಷಣ (1ನೇ ತರಗತಿ)** | |
| 3. ಆಹಾರ ನೀರು ಮತ್ತು ಗಾಳಿಯ ತಪ್ಪು ಬಳಕೆಯಿಂದ ಆರೋಗ್ಯದ ಮೇಲಾಗುವ ದುಷ್ಪರಿಣಾಮಗಳ ಬಗ್ಗೆ ಅರಿವನ್ನು ಮೂಡಿಸುವುದು. | VI.<br>ಅ) ಆಹಾರ: ಸಾಮಾನ್ಯ ಆಹಾರ ವಸ್ತುಗಳು ಶುಚಿಯಾದ ಹಾಗೂ ಆರೋಗ್ಯಕರವಾದ ಆಹಾರದ ಜ್ಞಾನ.<br>ಬ) ನೀರು: ನೀರಿನ ಮೂಲಗಳು ಶುದ್ಧ ನೀರಿನ ಪರಿಕಲ್ಪನೆ, ನೀರಿನ ಮೂಲಗಳ ಸುತ್ತಸ್ವಚ್ಛತೆಯನ್ನು ಕಾಪಾಡುವ ಪರಿಕಲ್ಪನೆ ಸೋಸುವಿಕೆಯ ಸರಳ ವಿಧಾನಗಳು.<br>ಕ) ಗಾಳಿ: ಶುದ್ಧಗಾಳಿಯ ಪರಿಕಲ್ಪನೆ, ಕಿಟಕಿಗಳನ್ನು ತೆರೆದಿಡುವ ಪರಿಕಲ್ಪನೆ, ಮಲಗಿರುವಾಗ ಮುಖಕ್ಕೆ ಮುಸುಕು ಹಾಕದಿರುವ ಪರಿಕಲ್ಪನೆ ಬಯಲಿನಲ್ಲಿ ಆಡುವ ಪರಿಕಲ್ಪನೆ. | |
| 3.1 ಆರೋಗ್ಯವನ್ನು ಕಾಪಾಡಿಕೊಳ್ಳಲು ಮತ್ತು ಸೂಕ್ತ ಬೆಳವಣಿಗೆಗಾಗಿ ಆರೋಗ್ಯಕರ ಅಭ್ಯಾಸಗಳನ್ನು ಬೆಳೆಸುವುದು. | ಡ) ವೈಯಕ್ತಿಕ ಆರೋಗ್ಯ:<br>1. ಹಲ್ಲುಗಳನ್ನು ಶುಚಿ ಮಾಡುವುದು.<br>2. ಉಗುರುಗಳನ್ನು ಕತ್ತರಿಸುವುದು.<br>3. ಕೈಗಳನ್ನು ತೊಳೆಯುವುದು.<br>4. ಕೂದಲನ್ನು ಬಾಚಿಕೊಳ್ಳುವುದು. | ಪ್ರತಿದಿನವೂ ಸಾಮೂಹಿಕ ಪ್ರಾರ್ಥನೆಯ ನಂತರ ಶಿಕ್ಷಕ ಅಥವಾ ಹಿರೇಮಣಿಯು ಹಲ್ಲುಗಳನ್ನು ಉಗುರಗಳನ್ನು ಕೂದಲನ್ನು ಬಾಚಿರುವುದನ್ನು ನಿರೀಕ್ಷಿಸುವುದು. |
| | ಇ) ಸಮುದಾಯ ಆರೋಗ್ಯ<br>- ತರಗತಿಯನ್ನು ಶುಚಿ ಮಾಡುವುದು.<br>- ಮೂತ್ರ ವಿಸರ್ಜಿಸಲು, ತ್ಯಾಜ್ಯ ವಸ್ತುಗಳನ್ನು ಎಸೆಯಲು ದೂರದಲ್ಲಿರುವ ನಿರ್ದಿಷ್ಟ ಸ್ಥಳವನ್ನು ಉಪಯೋಗಿಸುವುದು. | ಉತ್ತಮ ಸಂಗತಿಗಳನ್ನು ಪ್ರಶಂಸಿಸಿ, ಮತ್ತು ತಪ್ಪುಗಳನ್ನು ತಿದ್ದಲು ಕ್ರಮ ಕೈಗೊಳ್ಳುವುದು. |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|
| 3.2 ಆರೋಗ್ಯಕ್ಕೆ ಹಾನಿಯಾಗುವುದನ್ನು ತಪ್ಪಿಸಲಿಕ್ಕಾಗಿ ಪ್ರಥಮ ಚಿಕಿತ್ಸೆ ಮತ್ತು ಸುರಕ್ಷತಾ ಕ್ರಮಗಳ ಬಗ್ಗೆ ಅರಿವನ್ನು ಮೂಡಿಸುವುದು | VII ಸುರಕ್ಷತಾ ಕ್ರಮಗಳು ಮತ್ತು ಪ್ರಥಮ ಚಿಕಿತ್ಸೆ:<br>ಅ) ರೋಗಗಳನ್ನು ತಡೆಗಟ್ಟುವುದು ಈ ವಿಷಯದಲ್ಲಿ ಹಿರಿಯರ ಚಟುವಟಿಕೆಗಳನ್ನು ಗಮನಿಸಿ<br>ಬ) ಸುರಕ್ಷತಾ ಕ್ರಮಗಳು ಈ ವಿಷಯದಲ್ಲಿ ಹಿರಿಯರ ಚಟುವಟಿಕೆಗಳು ಗಮನಿಸಿ<br>ಕ) ಪ್ರಥಮ ಚಿಕಿತ್ಸೆ<br>ಈ ವಿಷಯದಲ್ಲಿ ಹಿರಿಯರ ಚಟುವಟಿಕೆಗಳನ್ನು ಗಮನಿಸಿ | - ಮಕ್ಕಳನ್ನು ಪ್ರಸ್ತುತ ಸನ್ನಿವೇಶಗಳಿಗೆ ಕರೆದೊಯ್ದು ವೀಕ್ಷಿಸುವಂತೆ ಮಾಡಿ.<br>- ವೀಕ್ಷಿಸಬೇಕಾದ ಮುಖ್ಯ ಅಂಶಗಳ ಬಗ್ಗೆ ಗಮನ ಸೆಳೆಯುವಂತೆ ಮಾಡುವುದು.<br>- ಚರ್ಚೆ ಹಾಗೂ ಸಂಭಾವಣೆಯ ಮೂಲಕ ಅನುಸರಣಾ ಕಾರ್ಯ ಮಾಡಬೇಕು. |

## 2. ತರಗತಿವಾರು ದೈಹಿಕ ಶಿಕ್ಷಣ ಮತ್ತು ಆರೋಗ್ಯ ಶಿಕ್ಷಣ ಪಠ್ಯವಸ್ತು (ತರಗತಿ - 2)

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | | | ಮಾರ್ಗೋಪಾಯ / ಚಟುವಟಿಕೆ |
|---|---|---|---|---|
| | | **ದೈಹಿಕ ಶಿಕ್ಷಣ** | | |
| 1. ಗಾಂಭೀರ್ಯ ಆರೋಗ್ಯ ಅಂಗರೀವಿಗಳನ್ನು ಬೆಳೆಸುವುದು | ಅನೌಪಚಾರಿಕ ಚಟುವಟಿಕೆಗಳು<br>ಅ) 1ನೇ ತರಗತಿಯಲ್ಲಿದ್ದಂತೆ ಉಪಕರಣ ಆಟ (1ನೇ ತರಗತಿಯಲ್ಲಿದ್ದಂತೆ)<br>ಮೇಲಾಟಗಳು (Athletics) ಇಲ್ಲ | | | ಮೇಲಾಟಗಳು ಇಲ್ಲ ಚಟುವಟಿಕೆಗಳನ್ನು ಪ್ರದರ್ಶಿಸುವುದು ಮತ್ತು ಅಭ್ಯಾಸ ಮಾಡಿಸುವುದು. |
| 2. ದೇಹದಾರ್ಢ್ಯತೆಯನ್ನು ಬೆಳೆಸುವುದು<br>ಅ) ದೇಹದಾರ್ಢ್ಯತೆ<br>ಬ) ಗುಂಪಿನಲ್ಲಿ ಹೊಂದಾಣಿಕೆ<br>ಕ) ಸಹಕಾರ | 1. | ಆನೆ ನಡಿಗೆ | ಕೈಗಳನ್ನು ಸೊಂಡಿಲಿನಂತೆ ತೂಗಾಡಿಸುತ್ತ ದೇಹವನ್ನು ಬಾಗಿಸಿ ಆನೆಯಂತೆ ನಡೆಯುವುದು ಸಂಜ್ಞೆ ನೀಡಿ ದೊಡನೆಯೇ 4 ಮೂಲೆಗಳಿಗೆ ಓಡುವುದು. | |
| | | ಕೈಗಳಿಗೆ | ಕೋತಿಯಂತೆ ನಡೆಯುವುದು | |
| | | ಸೊಂಟಕ್ಕೆ | ಒಂದು ಮರವನ್ನು ಕೊಡಲಿಯಿಂದ ಕಡಿಯುವಂತೆ ಎರಡೂ ಕೈಗಳನ್ನು ತಲೆಯ ಮೇಲೆತ್ತಿ ದೇಹವನ್ನು ರಭಸದಿಂದ ಕೆಳಕ್ಕೆ ಬಾಗಿಸುವುದು ಸೊಂಟವನ್ನು ಬಾಗಿಸಿ ಮೇಲೆತ್ತಬೇಕು. | |
| | 2. | ಕಾಳಿನ ಚೀಲಗಳನ್ನು ಎಸೆಯುವುದು, ಹಿಡಿಯುವುದು<br>ಅ) ಒಗ್ಗುವ ಸ್ಪರ್ಧೆ<br>ಬ) ಸೊಂಟಕ್ಕೆ : ಬೆನ್ನಿನ ಮೇಲೆ ಮುಂದಕ್ಕೆ ಹಾಗೂ ಹಿಂದಕ್ಕೆ ತೂಗಾಡುವುದು | | - ಮೇಲಿನಂತೆ - |
| | 3. | ಕೈಗಳನ್ನು ಹಿಡಿದು ಮೃತಾಕಾರವಾಗಿ ನಿಲ್ಲುವುದು. ಸಂಜ್ಞೆ ನೀಡಿದೊಡನೆಯೇ ಓಡಿ 4 ಉದ್ದ ಸಾಲುಗಳಲ್ಲಿ ನಿಲ್ಲುವುದು | | |
| | 4. | ಉಪಕರಣ ಕವಾಯಿತು-ಇಲ್ಲ | | ಉಪಕರಣ ಕವಾಯಿತು - ಇಲ್ಲ |

| ಸಾಮರ್ಥ್ಯ / ಉಪಸಾಮರ್ಥ್ಯ | | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|---|
| | | 5. ಸಾಮೂಹಿಕ ಕವಾಯಿತು - ಇಲ್ಲ | ಸಾಮೂಹಿಕ ಕವಾಯಿತು ಇಲ್ಲ. |
| 3. | ದೈಹಿಕ ನ್ಯೂನತೆಗಳನ್ನು ಅರಿಯಲು ಮಗುವಿಗೆ ನೆರವು ನೀಡುವುದು ಮತ್ತು ಚಿಕಿತ್ಸಕ(Corrective) ದೈಹಿಕ ಶಿಕ್ಷಣ ಮತ್ತು ಪರಿಹಾರಾತ್ಮಕ ವಿಧಾನಗಳನ್ನು ಆಯ್ದು ಅಳವಡಿಸಲು ನೆರವು ನೀಡುವುದು. ಕ್ರೀಡಾಮನೋಭಾವ ಸಂಘ ಭಾವನೆ. ಸಹಕಾರ, ಆತ್ಮವಿಶ್ವಾಸಗಳನ್ನು ಬೆಳೆಸುವುದು. | ಆಟಗಳು<br>1. ಸಾಧಾರಣ ಮುಟ್ಟಾಟ ಹಾಗೂ ಅದರ ವೈವಿಧ್ಯಗಳು<br>2. ಹಗ್ಗದ ಮುಟ್ಟಾದ (Skip Tag)<br>3. ನೋಡಿ ಅಥವಾ ಕಂಟುತ್ತಾ ಮುಟ್ಟುವ ಆಟ<br>4. ಸಮುದ್ರದಲ್ಲಿ ಕಪ್ಪೆ (ಕೆರೆದಡೆ)<br>5. ಅತಿ ಎತ್ತರ ಅತಿ ಚಿಕ್ಕದ್ದು (ದೈತ್ಯ ಮತ್ತು ಕುಳ್ಳ<br>6. ನಾಯಿ ಮತ್ತು ಮೂಳೆ (ಕರವಸ್ತ್ರ ಕಿತ್ತುಕೊಳ್ಳುವುದು). | ಪ್ರದರ್ಶನ ಮತ್ತು ಅಭ್ಯಾಸ |
| 4. | ದೈಹಿಕ ಕೌಶಲ್ಯ ಮತ್ತು ನರ ಮತ್ತು ಸ್ನಾಯುಗಳ ಹೊಂದಾಣಿಕೆ ಬೆಳೆಸಿ ಅಭಿವೃದ್ಧಿಪಡಿಸುವುದು. | ಲಯಬದ್ಧ ಆಟಗಳು<br>1. ಮರಕಡಿಯುವವರ ಹಾಡು<br>2. ಗುಬ್ಬಿ ಹಾಡು<br>3. ಧರ್ಮರ ದಮನ (ತಮಿಳು ಹಾಡು) (Dharmara Damasa)<br>4. ಸುಗ್ಗಿ ಹಾಡು<br>5. ಅಂಬಿಗರ ಹಾಡು | |
| 1.<br>2.<br>3.<br>4. | ಸುಧಾರಿಸಿಕೊಳ್ಳುವಿಕೆ<br>ಭಾಗವಹಿಸುವಿಕೆಯಲ್ಲಿ ಆನಂದ<br>ಸಂಘ ಭಾವನೆ<br>ರವಾಭಿನಂದನೆ | **ಮನೋರಂಜಕ ಚಟುವಟಿಕೆಗಳು**<br>1. ಕುಂಟು ನಾಯಿಯ ಓಟ<br>2. ಕರಡಿಗಳು<br>3. ಚಿಟ್ಟೆಗಳು<br>4. ನೀರುಕುಡಿಯುವ ಕೋಳಿಮರಿ | ಪ್ರದರ್ಶನ ಮತ್ತು ಪುನಃ ಪುನಃ ಅಭ್ಯಾಸ ಮಾಡಿಸುವುದು. |

| ಸಾಮರ್ಥ್ಯ / ಉಪಸಾಮರ್ಥ್ಯ | | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|---|
| | 5. | ಒಂಟಿಯ ನಡಿಗೆ | |
| | 6. | ಹತ್ತಿರದ ಸ್ಥಳಗಳಿಗೆ ಹೊರ ಸಂಚಾರ (ಕಾಲ್ನಡಿಗೆಯಲ್ಲಿ ಬೇಟಿ)<br>ವಾಹನಗಳು | |
| | 1. | ವಿಮಾನ, 2. ಮೋಟಾರು ಕಾರು, 3. ದೋಣಿ ಹುಟ್ಟು ಹಾಕುವುದು<br>**ಕಥಾಭಿನಯ ಮತ್ತು ನಾಟಕಾಭಿನಯಗಳು**<br>ಕೋತಿ ಮತ್ತು ಟೋಪಿ ಮಾರುವವ ತೋಳ ಮತ್ತು ಕುರಿ ಕಾಯುವವ ಸಿಂಹ ಮತ್ತು ನಾಲ್ಕು ಗೂಳಿಗಳು ಸರ್ಕಸ್ಸಿಗೆ ಹೋಗುವುದು<br>(ಸಮೂಹ ಗೀತೆಗಳು - 1ನೇ ತರಗತಿಯಲ್ಲಿದ್ದಸಂತೆ ಮುಂದುವರಿಸುವುದು)<br>**ಆರೋಗ್ಯ ಶಿಕ್ಷಣ (2ನೇ ತರಗತಿ)** | |
| 5. ಸ್ಥಳೀಯವಾಗಿ ದೊರೆಯುವ ಆಹಾರಗಳ ಪೋಷಕಾಂಶಗಳ ಬಗ್ಗೆ ಅರಿವು ಮೂಡಿಸುವುದು. | ಅ. | ಆಹಾರ | ಪ್ರದರ್ಶನ ಮತ್ತು ಅಭ್ಯಾಸ ಮಾಡಿಸುವುದು. |
| ನೀರಿನ ಸಂಗ್ರಹ, ಶುದ್ಧೀಕರಣ ಮತ್ತು ನೀರನ್ನು | ಬ. | ನೀರು | |
| ಆರೋಗ್ಯಕರವಾದ ರೀತಿಯಲ್ಲಿ ಬಳಸುವುದಕ್ಕೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಮಾಡುವುದು. | ಕ. | ಗಾಳಿ | |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|
| ಶುದ್ಧಗಾಳಿಯ ಅವಶ್ಯಕತೆ ಅರಿಯುವುದು | ಡ 1. ವೈಯಕ್ತಿಕ ಆರೋಗ್ಯ<br>2. ಸಮುದಾಯ ಆರೋಗ್ಯ<br>3. ಶುಚಿತ್ವ (ವೈಯಕ್ತಿಕ)<br>1. ತಲೆ ಬಾಚಿಕೊಳ್ಳುವ ಸಾಮೂಹಿಕ ಅಭ್ಯಾಸ<br>2. ತೆರೆದಿಟ್ಟ ತಿಂಡಿ ತಿನಿಸುಗಳನ್ನು ತಿನ್ನಬಾರದೆಂದು ಮಕ್ಕಳಿಗೆ ಉಪದೇಶಿಸುವುದು<br>3. ಊಟದ ಮೊದಲು ಮತ್ತು ನಂತರ ಕೈತೊಳೆಯುವ ಕ್ರಮ<br>4. ಊಟದ ನಂತರ ವಿಶ್ರಾಂತಿ ಪಡೆಯುವುದು. | ಕ್ರಮಬದ್ಧವಾಗಿ ತಪ್ಪದೆ ರೂಢಿಮಾಡಿ ಮೇಲ್ವಿಚಾರಣೆ ಮಾಡಿಸುವುದು. |
| | **ಸರಿಯಾದ ಭಂಗಿಗಳು** | **ರೂಢಿ ಮಾಡಿಸುವುದು** |
| ಅಂಗಾಂಗಗಳ ಸೌಂದರ್ಯದ ಅರಿವು ಮೂಡಿಸುವುದು. | 1. ಕುಳಿತುಕೊಳ್ಳುವ<br>2. ನಡೆಯುವ<br>3. ಓದುವ<br>4. ಬರೆಯುವ | |

## 3 ತರಗತಿವಾರು ದೈಹಿಕ ಶಿಕ್ಷಣ ಮತ್ತು ಆರೋಗ್ಯ ಶಿಕ್ಷಣ ಪಠ್ಯಕ್ರಮ (ತರಗತಿ - 3)

| | ಸಾಮರ್ಥ್ಯ / ಉಪಸಾಮರ್ಥ್ಯ | | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|---|---|
| | | | **ದೈಹಿಕ ಶಿಕ್ಷಣ** | |
| 1 | ಗಾಂಭೀರ್ಯ ಆರೋಗ್ಯ ಮತ್ತು ಅಂಗರೀವಿಗಳನ್ನು ಬೆಳೆಸುವುದು | I | **ಅನೌಪಚಾರಿಕ ಚಟುವಟಿಕೆಗಳು** | ಪ್ರದರ್ಶನ ಮತ್ತು ಅಭ್ಯಾಸ |
| | | 1. | ಎರಡೂ ಕೈ ಹಾಗೂ ಎರಡೂ ಕಾಲು ಊರಿ ಚಲಿಸುವುದು ಸಂಜ್ಞೆ ನೀಡಿದಾಗ ಮೊಲದಂತೆ ಜಿಗಿಯುವುದು | |
| | ಗಂಭೀರ ಚಲನೆ | 2. | ಸ್ವತಂತ್ರ ನಡಿಗೆಯಿಂದ ವೇಗವಾದ ನಡಿಗೆಗೆ ಬದಲಾಯಿಸುವುದು | |
| | | 3. | ಶಿಕ್ಷಕನು ಹುರುಳಿ ಬೀಜದ ಚೀಲಗಳನ್ನು ಎಲ್ಲ ದಿಕ್ಕುಗಳಲ್ಲಿ ಎಸೆಯುವುದು. ಮಕ್ಕಳು ಅವುಗಳನ್ನು ಆಯ್ದು ಶಿಕ್ಷಕನಿಗೆ ಕೊಡುವುದು. | |
| | | | **ಉಪಕರಣ ಆಟಗಳು** | ಮೇಲಿನಂತೆ |
| | | | ಉಯ್ಯಾಲೆಗಳು | |
| | | | ನೆಲಕ್ಕೆ ಸಮಾಂತರವಾಗಿರುವ ಮತ್ತು ಹತ್ತುವ ಏಣಿಗಳು | |
| | | | ಮರಳಿನ ಪೆಟ್ಟಿಗೆ | |
| | | | ತೂಗುತೊಲೆ (See Saw) | |
| 2 | ದೇಹದಾರ್ಢ್ಯ ಬೆಳೆಸುವುದು. ಕೌಶಲ್ಯ | II | **ಮೇಲಾಟಗಳು (Athletics)** | ಪ್ರದರ್ಶನ ಮತ್ತು ಅಭ್ಯಾಸ |
| | | | 50 ರಿಂದ 75 ಮೀ.ಗಳ ಸರಳ ಓಟ | |
| | ನಿಯಂತ್ರಣ ಹಾಗೂ ಸಮನ್ವಯಗೊಳಿಸುವುದು | | **ಯೋಗಾಸನಗಳು** | ಮೇಲಿನಂತೆ |
| | | | ಪದ್ಮಾಸನ ಮತ್ತು ಸೂರ್ಯ ನಮಸ್ಕಾರಗಳಲ್ಲಿ ಭಾಗವಹಿಸುವುದು | |

| | ಸಾಮರ್ಥ್ಯ / ಉಪಸಾಮರ್ಥ್ಯ | | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|---|---|
| | | III. | **ಔಪಚಾರಿಕ ಚಟುವಟಿಕೆಗಳು** | |
| | ಗುಂಪಿನಲ್ಲಿ ಸಮನ್ವಯಗೊಳಿಸುವುದು | ಅ) | ಪಾದ ಕವಾಯಿತು (Marching) ಆಜ್ಞೆಗಳಿಗೆ ತಕ್ಕಂತೆ ಗಮನರ್ಹವಾದ ಪ್ರತಿಕ್ರಿಯೆಗಳು. | ಮೇಲಿನಂತೆ |
| | | ಅ) | ಸಾವಧಾನ್ (Attention) | |
| | | ಬ) | ವಿಶ್ರಾಮ್ (Stand at ease) | |
| | | ಇ) | ಅರಾಂಸೆ (ದೇಹ ಸಡಿಲಬಿಟ್ಟುನಿಲ್ಲಿ) (Stand easy) | |
| | | ಕ) | ದಹಿನೇ ಮೂಡ್ (ಬಲಭಾಗಕ್ಕೆ ತಿರುಗು) ಮತ್ತು ಬಾಯೆ ಮೂಡ್ (ಎಡಭಾಗಕ್ಕೆ ತಿರುಗು) | |
| | | ಇ) | ಕದಂತಾಲ್ ಮತ್ತು ರುಕ್ ಜಾ (ಕಾಲವನ್ನು ಗುರುತಿಸುವುದು ಮತ್ತು ನಿಲ್ಲುವುದು) (Marking time and halt) | |
| 3. | ಸಮುದಾಯ ಭಾವನೆಗಳನ್ನು ಮತ್ತು ಸಾಮಾಜಿಕ ಗುಣಗಳನ್ನು ಬೆಳೆಸುವುದು. | ii) | ಉಪಕರಣ ಕವಾಯಿತು. | ಮೇಲಿನಂತೆ |
| | | ಅ | ಕುಮ್ಮಿ    ಬ. ಕೋಲಾಟ | |
| | ಕ್ರೀಡಾ ಮನೋಭಾವ ಸಹಕಾರ ಭಾವನೆ ಆತ್ಮವಿಶ್ವಾಸ ಮೂಡಿಸುವುದು. | ಕ. | ಪುಂಗಡಿ    ಡ. ಜಿಮ್ಮೆ | |
| | | ಇ. | ಧ್ವಜಕವಾಯಿತು | |
| | | IV | **ಆಟಗಳು** | ಪ್ರದರ್ಶನ ಮತ್ತು ಅಭ್ಯಾಸ |
| | | | ಬಿಡುವುದು ಮತ್ತು ಹಿಡಿಯುವುದು ಕಾಗೆಗಳು ಮತ್ತು ಕೊಕ್ಕರೆಗಳು ಜೊತೆಗಾರರನ್ನು ಕಂಡು ಹಿಡಿಯುವುದು | |
| | | | ಸರಪಳಿ ಮುಟ್ಟಾಟ (Chain tag) | |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|
| | ಕೋಟೆಗೆ ಮುತ್ತಿಗೆ ಹಾಕುವುದು | |
| | ಕಳ್ಳ ಮತ್ತು ಪೊಲೀಸ್ | |
| | ಕುಂಟಾಟ | |
| | ಸರಳ ಖೋ ಖೋ ಆಟ | |
| | **ಲಯಬದ್ಧ ಚಟುವಟಿಕೆಗಳು** | |
| | 1. ದೂರಕ್ಕೆ ಜಿಗಿಯುವುದು ಮತ್ತು ತಲೆಯ ಮೇಲೆ ಚಪ್ಪಾಳೆ ತಟ್ಟುವುದು ಮತ್ತು ಲಯಬದ್ಧವಾಗಿ ಹಿಂದಕ್ಕೆ ಬರುವುದು | ಮೇಲಿನಂತೆ |
| | 2. ಹೆಜ್ಜೆಗಳನ್ನು ಬಿಟ್ಟು ಬಿಟ್ಟು ಹಾಕುವುದು (Skipping Steps) | |
| | 3. ಓಡುವುದು, ಕುಪ್ಪಳಿಸುವುದು, ಮತ್ತು ಜಿಗಿಯುವುದು ನಾಗಾಲೋಟ (Galloping) | |
| | **V. ಮನೋರಂಜಕ ಚಟುವಟಿಕೆಗಳು** | |
| 4. ಸುಧಾರಿಸಿಕೊಳ್ಳುವಿಕೆ (Relaxation) | ಗಂಟೆ ಹೊಡೆಯುವುದು | ಮೇಲಿನಂತೆ |
| 1. ಸುಧಾರಿಸಿಕೊಳ್ಳುವುದು | | ಮೇಲಿನಂತೆ |
| 2. ಭಾಗವಹಿಸುವಿಕೆಯಲ್ಲಿ ಆನಂದ | ಈಜುವುದು - ನದಿ ತೀರಕ್ಕೆ ಭೇಟಿ ತೋಟ ಮಾಡುವುದು (ಗಿಡಗಳನ್ನು ಬೆಳೆಸುವ ಅಭ್ಯಾಸ) ಕಥಾಭಿನಯ ಮತ್ತು ನಾಟಕಗಳು | |
| 3. ಸಂಘ ಮನೋಭಾವ | ಪೇಟೆ | |
| 4. ರಸಾಭಿನಂದನೆ | ಹಬ್ಬ | |
| | ಗುಂಪು ಗೀತೆಗಳು - ಹಿಂದಿನ ತರಗತಿಯಲ್ಲಿದ್ದಂತೆ ಮುಂದುವರಿಸುವುದು. | |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|
| | **ಆರೋಗ್ಯ ಶಿಕ್ಷಣ (3ನೇ ತರಗತಿ)** | |
| VI | ಅ. **ಆಹಾರ** | |
| 5. ಆರೋಗ್ಯಕರವಾದ ಮತ್ತು ಶುಚಿತ್ವದ ಅಭ್ಯಾಸಗಳನ್ನು ಅಭಿವೃದ್ಧಿಪಡಿಸುವುದು. | ಸ್ಥಳೀಯವಾಗಿ ದೊರೆಯುವ ಆಹಾರ ಪದಾರ್ಥಗಳ ಪೌಷ್ಠಿಕ ಮೌಲ್ಯವನ್ನು ಅರಿಯುವುದು ಮತ್ತು ಆರೋಗ್ಯ ಸೂತ್ರಗಳಿಗನುಸಾರವಾಗಿ ಆಹಾರವನ್ನು ತಯಾರಿಸುವುದು. | |
| | ಬ. **ನೀರು** | |
| | ನೀರಿನ ಸಂಗ್ರಹಣೆ ಮತ್ತು ಆರೋಗ್ಯ ಸೂತ್ರಗಳಿಗನುಸಾರವಾಗಿ ನೀರಿನ ಬಳಕೆಗೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ಭಾಗವಹಿಸುವುದು. | |
| | ಕ. **ಗಾಳಿ** | |
| | ಶುದ್ಧ ಗಾಳಿಯ ಉಪಯೋಗಕ್ಕೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ಭಾಗವಹಿಸುವುದು | |
| | ಡ. **ವೈಯಕ್ತಿಕ ಆರೋಗ್ಯ** | |
| | 1. ವೈಯಕ್ತಿಕ ಶುಚಿತ್ವ | 1. ವೈಯಕ್ತಿಕ ಶುಚಿತ್ವವಾಗಿ ಶುಚಿಯಾದ ಬಾಚಣಿಕೆ, ಟವೆಲ್ಲುಗಳನ್ನು ಉಪಯೋಗಿಸುವುದು. |
| | 2. ಸಮುದಾಯದ ಶುಚಿತ್ವ | 2. ಆಟದ ನಂತರ ವಿಶ್ರಾಂತಿ ಪಡೆಯುವ ಮತ್ತು ರಾತ್ರಿ ಗೊತ್ತಾದ ವೇಳೆಯಲ್ಲಿ ಮಲಗುವ ಅಭ್ಯಾಸಗಳನ್ನು ಬೆಳೆಸುವುದು. |

| ಸಾಮರ್ಥ್ಯ / ಉಪಸಾಮರ್ಥ್ಯ | | ವಿಷಯ ಮತ್ತು ಚಟುವಟಿಕೆ | | ಮಾರ್ಗೋಪಾಯ / ಚಟುವಟಿಕೆ | |
|---|---|---|---|---|---|
| | | | | 3. | ಸರಿಯಾದ ರೀತಿಯಲ್ಲಿ ಕುಳಿತುಕೊಳ್ಳುವ, ನಿಲ್ಲು, ನಡೆಯುವ ಓದುವ, ಬರೆಯುವ ಮತ್ತು ಭಾರವನ್ನು ಕೊಂಡೊಯ್ಯುವ ಭಂಗಿಗಳನ್ನು ಪ್ರದರ್ಶಿಸುವುದು ಮತ್ತು ಅಭ್ಯಾಸ ಮಾಡಿಸುವುದು. |
| | | VII | **ಸುರಕ್ಷತಾ ಕ್ರಮಗಳು ಮತ್ತು ಪ್ರಥಮ ಚಿಕಿತ್ಸೆ** | | |
| 6. | ದೇಹವನ್ನು ಮತ್ತು ಆರೋಗ್ಯವನ್ನು ಕಾಪಾಡಿಕೊಳ್ಳುವ ಅರಿವನ್ನು ಮೂಡಿಸುವುದು. | ಅ)<br>ಬ)<br>ಕ) | ರೋಗಗಳನ್ನು ತಡೆಗಟ್ಟುವ ಕ್ರಮ<br>ಸುರಕ್ಷತಾ ಕ್ರಮಗಳು (ವಿಧಾನ)<br>ಪ್ರಥಮ ಚಿಕಿತ್ಸಾ ವಿಧಾನಗಳು | 1.<br><br>2. | ಮನೆ, ಶಾಲೆ, ರಸ್ತೆ ಮತ್ತು ಆಟದ ಬಯಲಿನಲ್ಲಿ ಸುರಕ್ಷತೆಯ ನಿಯಮಗಳನ್ನು ಅಭ್ಯಾಸ ಮಾಡುವುದು.<br>ರೋಗಗಳ ಮತ್ತು ಧನರ್ವಾತದ ವಿರುದ್ಧ ರೋಗ ನಿರೋಧಕ ಕ್ರಮ ಕೈಗೊಳ್ಳುವುದು |

**4 ತರಗತಿವಾರು ದೈಹಿಕ ಶಿಕ್ಷಣ ಮತ್ತು ಆರೋಗ್ಯ ಶಿಕ್ಷಣ ಪಠ್ಯವನ್ನು (ತರಗತಿ - 4)**

| ಸಾಮರ್ಥ್ಯ / ಉಪಸಾಮರ್ಥ್ಯ | | ವಿಷಯ ಮತ್ತು ಚಟುವಟಿಕೆ | | | ಮಾರ್ಗೋಪಾಯ / ಚಟುವಟಿಕೆ |
|---|---|---|---|---|---|
| | | | **ದೈಹಿಕ ಶಿಕ್ಷಣ** | | |
| 1 | 1.1, 1.2,1.3, 1.4 ತರಗತಿ 1ರಲ್ಲಿದ್ದಂತೆ ಹೆಚ್ಚಿನ ದಕ್ಷತೆಯೊಡನೆ | I | **ಅನೌಪಚಾರಿಕ ಚಟುವಟಿಕೆಗಳು** | | ಪ್ರದರ್ಶನ, ಅನುಕರಣ, ಅಭ್ಯಾಸ |
| | | ಅ) | **ಅಭ್ಯಾಸ-1** | | |
| | | 1. | **ಪೀಠಿಕಾ ರೂಪ:** | ಹಳೆಯ ಟೆನಿಸ್ ಚೆಂಡನ್ನು ನೆಲಕ್ಕೆ ತಟ್ಟಿ ಪುಟಿಸುವುದು | |
| | | 2. | **ಕೈಗಳಿಗೆ:** | ಕೈಕಾಲುಗಳನ್ನು ನೆಲಕ್ಕೆ ಊರಿ, ಏಡಿಯಂತೆ ಪಕ್ಕಕ್ಕೆ ನಡೆಯುವುದು | |
| | | 3. | **ಸೊಂಟಕ್ಕೆ:** | ಅ) ಮೊಣಕಾಲುಗಳ ಆಧಾರದ ಮೇಲೆ ಪರ್ಯಾಯವಾಗಿ ಕಾಲನ್ನು ಹಿಂದಕ್ಕೆ ಚಾಚುವುದು.<br>ಬ) (ಮೊಣಕಾಲುಗಳ ಆಧಾರದ ಮೇಲೆ) ತಲೆ ಮತ್ತು ದೇಹವನ್ನು ತಿರುಗಿಸುತ್ತ ಕೈಗಳನ್ನು ಪಕ್ಕಗಳಿಗೆ ಹಾಗೂ ಹಿಂದಕ್ಕೆ ಪರ್ಯಾಯವಾಗಿ ಬೀಸುವುದು. | |
| | | 4. | **ಕಾಲುಗಳಿಗೆ:** | ನಿಂತಲ್ಲಿಂದಲ್ಲೇ ದೂರಕ್ಕೆ ಜಿಗಿಯುವುದು (Standing Long Jump) | |
| | | 5. | **ಸಮತೋಲನ:** | ಒಂದು ಕಾಲಿನಿಂದ ರಬ್ಬರ್ ಚೆಂಡನ್ನು ನೆಲಕ್ಕೆ ಕುಟ್ಟಿ ಪುಟವೇಳಿಸುವುದು. | |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | | | ಮಾರ್ಗೋಪಾಯ / ಚಟುವಟಿಕೆ |
|---|---|---|---|---|
| | **ಅಭ್ಯಾಸ - 2** | | | |
| | **1.** | **ಪೀಠಿಕಾ ರೂಪ:** | ನಾಯಕನನ್ನು ಅನುಸರಿಸುವುದು, ಸಂಜ್ಞೆ ದೊರೆತಾಗ ಚಟುವಟಿಕೆಗಳನ್ನು ಬದಲಾಯಿಸವುದು | ಪ್ರದರ್ಶನ ಮಾಡಿ, ಮಾಡಿಸುವುದು |
| | **2.** | **ಕೈಗಳಿಗೆ:** | (ಕೈಗಳನ್ನಗಲಿಸಿ) ಕೈಗಳನ್ನು ಮೊದಲು ಮುಂದಕ್ಕೆ ನಂತರ ನಿಲ್ಲುವುದು, ಮಂಡಿಗಳನ್ನು ನೆಟ್ಟಗೆ ಮಾಡುವುದು, ಕೈಗಳ ನಡುವೆ ಬಲ ಮಂಡಿಯನ್ನೂರಿ ಕುಳಿತುಕೊಳ್ಳುವುದು, ಮತ್ತೆ ಮಂಡಿಯನ್ನು ನೆಟ್ಟಗೆ ಮಾಡುವುದು, ಎಡಮಂಡಿಯಿಂದ ಅದೇ ರೀತಿ ಮಾಡುವುದು<br>ಬ) (ಬಾಗಿನಿಲ್ಲುವುದು) ಜಿಗಿದು ಹಿಂದಕ್ಕೆ ತಿರುಗಿ ಬಾಗಿ ನಿಲ್ಲುವುದು | |
| | **4.** | **ಕಾಲುಗಳಿಗೆ:** | (ನಡಿಗೆಯ ಭಂಗಿ) ಪಾದಗಳನ್ನು ಹಿಂದಕ್ಕೆ ಮುಂದಕ್ಕೆ ಆಡಿಸುವುದು. ಎತ್ತರಕ್ಕೆ ಜಿಗಿದು ಪುಟವೇಳುವುದು. | |
| | **5.** | **ಸಮತೋಲನ:** | (ಒಂದು ಕಾಲಿನ ಮೇಲೆ ನಿಲ್ಲುವುದು) ಬಿಡುವಾಗಿರುವ ಕಾಲನ್ನು ಲಯಬದ್ಧವಾಗಿ ಮುಂದಕ್ಕೆ ಆಡಿಸುವುದು. | |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | | ಮಾರ್ಗೋಪಾಯ / ಚಟುವಟಿಕೆ |
|---|---|---|---|
| | **ಅಭ್ಯಾಸ - 3** | | |
| | **1. ಪೀಠಿಕಾ ರೂಪ:** | ಕಾಲುಗಳಿಂದ ರಬ್ಬರ್ ಚೆಂಡನ್ನು ಊರುಳಿಸುವುದು. | ಪ್ರದರ್ಶನ ಮಾದರಿ. |
| | **2. ಕೈಗಳಿಗೆ:** | (ಎದೆಯ ಮೇಲೆ ಕಟ್ಟಬೇಕು) ಕೈಗಳನ್ನು ಪಕ್ಕಗಳಿಗೆ ಹಿಂಭಾಗಕ್ಕೆ ತಂದು ಮತ್ತೆ ಮೊದಲಿನ ಸ್ಥಿತಿಗೆ ಬರುವುದು. | |
| | **3. ಸೊಂಟಕ್ಕೆ:** | ಅ) (ಮೊಣಕಾಲುಗಳನ್ನು ನೆಲಕ್ಕೆ ಊರಿ ಕುಳಿತುಕೊಳ್ಳುವುದು. ಪಾದಗಳು ಸ್ವಲ್ಪ ದೂರ ದೂರದಲ್ಲಿರಬೇಕು ಮತ್ತು ಆಧಾರಕ್ಕಾಗಿ ನೆಲದ ಮೇಲೆ ಹಿಂದಕ್ಕೆ ಕೈಗಳನ್ನೂರಿರಬೇಕು) ತಲೆಯನ್ನು ಹಿಂದಕ್ಕೆ ಇಳಿಬಿಟ್ಟು ಟೊಂಕವನ್ನು ಮೇಲಕ್ಕೆತ್ತುವುದು.<br>ಬ) ರಬ್ಬರ್ ಚೆಂಡನ್ನು ಪಕ್ಕದಿಂದ ಪಕ್ಕಕ್ಕೆ ತಟ್ಟಿ ಪುಟಿಸುವುದು. | |
| | **4. ಕಾಲುಗಳಿಗೆ:** | (ಮುಂದೆ ಬಾಗಿ ನಿಲ್ಲುವುದು) ಕಾಲುಗಳನ್ನು ಪರ್ಯಾಯವಾಗಿ ಪಕ್ಕಗಳಿಗೆ ಚಾಚುವುದು. | |
| | **5. ಸಮತೋಲನ:** | ಪರ್ಯಾಯವಾಗಿ ಒಂದು ಕಾಲನ್ನು ಮೇಲಕ್ಕೆತ್ತಿ ಲಯಬದ್ಧವಾಗಿ ಕುಪ್ಪಿಸುವುದು. | |
| | ಬ) ಉಪಕರಣ - ಇಲ್ಲ. | | |
| | ಕ) ಅಣಕ (Mimetics) - ಇಲ್ಲ | | |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|
| | II ಮೇಲಾಟಗಳು Athletics) | |
| ಆತ್ಮವಿಶ್ವಾಸವನ್ನು ಪಡೆಯುವರು | 1) 50-75 ಮೀ.ಗಳ ಓಟ (Dash)<br>2) ಉದ್ದಜಿಗಿತ (ನಿಂತಲ್ಲಿನಿಂದ) ಪ್ರದರ್ಶಿಸುವುದು<br>3) ದೂರಕ್ಕೆ ಚೆಂಡನ್ನು ಎಸೆಯುವುದು. | ಅಭ್ಯಾಸ<br>ದಕ್ಷತೆಯನ್ನು ಸಾಧಿಸುವ ತಂತ್ರಗಳನ್ನು ವೈಯಕ್ತಿಕ ನ್ಯೂನತೆಗಳನ್ನು ಕಂಡುಹಿಡಿದು ಪರಿಹರಿಸಬೇಕು. |
| | **II ಔಪಚಾರಿಕ ಚಟುವಟಿಕೆಗಳು** | |
| | ಅ) ಸರ್ವಾಂಗ ಸುಂದರ ವ್ಯಾಯಾಮಗಳು (Callisthenics)<br>1) ಮೇಲೆ ತಿಳಿಸಿರುವ ಗುಂಪು-1ರಲ್ಲಿ ಕೊಟ್ಟಿರುವ 1 ರಿಂದ 3 ರವರೆಗಿನ ಅಭ್ಯಾಸಗಳು-4 ಎಣಿಕೆಗಳಲ್ಲಿ ತೆಗೆದುಕೊಳ್ಳಬೇಕು<br>2) ಸಾಮೂಹಿಕ ಕವಾಯಿತಿಯಲ್ಲಿನ ವ್ಯಾಯಾಮಗಳು | - ಪ್ರದರ್ಶನ ಮತ್ತು ಅಭ್ಯಾಸ |
| | ಬ) ಅದ್ಭುತ ಶಕ್ತಿ ಪ್ರದರ್ಶನ ಮತ್ತು ಉರುಳುವುದು (Stunts and Tumbling)<br>1) ಎರಡು, ಮೂರು ಮತ್ತು ನಾಲ್ಕು ಸಲ ಮುಂದಕ್ಕೆ ಉರುಳುವುದು<br>2) ಹಾವಿನಂತೆ ಮುಂದೆ ಉರುಳುವುದು.<br>3) ಹಗ್ಗದ ಜಿಗಿತ-ಎರಡು ಹಗ್ಗಗಳು ಮತ್ತು ಇತರ ವೈವಿಧ್ಯಗಳು | - ಮೇಲಿನಂತೆ |
| | ಕ) ಜಾನಪದ ನೃತ್ಯ-3ನೇ ತರಗತಿಯಲ್ಲಿದ್ದುದಕ್ಕಿಂತ ಹೆಚ್ಚು ಪ್ರೌಢಿಮೆಯುಳ್ಳ ಚಲನೆಗಳೊಂದಿಗೆ ಸ್ಥಳೀಯವಾಗಿ ಪ್ರಚಲಿತವಿರುವ ಜಾನಪದ ನೃತ್ಯಗಳು | - ಮೇಲಿನಂತೆ |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|
| | ಡ) ಮನೋರಂಜಕ ಕವಾಯಿತು (Fancy drill)<br>ಡಂಬೆಲ್‌ಗಳು (Cliking Series)ಕೈಗಳ ಸರಳ ಚಲನೆಗಳು:<br>ಧ್ವಜಕವಾಯಿತು (4 ಸರಳ ವ್ಯಾಯಾಮಗಳು) | -ಮೇಲಿನಂತೆ |
| | ಇ) ಯೋಗಾಸನಗಳು : 1) ಪದ್ಮಾಸನ 2) ಸೂರ್ಯನಮಸ್ಕಾರ (ಹೆಚ್ಚಿನ ದಕ್ಷತೆಯೊಡನೆ) | -ಮೇಲಿನಂತೆ |
| | ಫ) ಪಾದಕವಾಯಿತು (Marching)<br>ಮೂಲಭೂತ ಸ್ಥಿತಿಗಳು, ಬಲಕ್ಕೆ ಸರಿಪಡಿಸಿಕೊಳ್ಳುವುದು (ದಯನೆ ದೇಖೋ), ಕತ್ತನ್ನು ಮುಂದಕ್ಕೆ ತಿರುಗಿಸಿಕೊಳ್ಳುವುದು (ಸಾಮನೇದೇಖೋ) ಕದಂಥಾಲ್ (Marking time) ಪೀಛೆ ಮೂಡ್ (ಹಿಂದಕ್ಕೆ ತಿರುಗುವುದು), ತೇಜ್ ಚಲ್ (ಶೀಘ್ರಗತಿಯ ಪಥಚಲನೆ Quick time marching ) ನಡೆಯುತ್ತಿರುವಾಗ ತಿರುಗುವುದು (Turning on the march) -ದಹಿನೆ ಘೂಮ್ (ಬಲಕ್ಕೆ ತಿರುಗು) ಬಾಯೆ ಘೂಮ್ (ಎಡಕ್ಕೆ ತಿರುಗು) ಪೀಛೆ ಮೂಡ್ (ಹಿಂದಕ್ಕೆ ತಿರುಗು) | - ಮೇಲಿನಂತೆ |
| | IV ಆಟಗಳು (Games) | |
| 2. 2.1.2.2 ತರಗತಿ 1ರಲ್ಲಿದ್ದಂತೆ | ಅ) ಸುಲಭ ಆಟಗಳ ಕೌಶಲ್ಯಗಳು<br>1) ಕೊನೆಯ ಜೋಡಿ ಹೊರಗೆ ಹೋಗುವುದು (Last Couple out)<br>2) ಸ್ಕ್ಯಾಡಲ್ ಬಾಲ್ (ಕಿಸಿಗಾಲು ಹಾಕಿ ನಿಂತು ಚೆಂಡು ಆಡುವುದು) | - ಆಟವನ್ನು ವಿವರಿಸಿ<br>- ನಿಯಮಗಳ ಬಗ್ಗೆ ಮತ್ತು ಅಂಕಗಳಿಕೆಯ ಬಗ್ಗೆ ವಿವರಿಸುವುದು<br>- ಪ್ರದರ್ಶಿಸಿ |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|
| | 3) ತೋಳಿಗೆ ತೋಳು ಸೇರಿಸಿ ಮುಟ್ಟುವ ಆಟ (Hook arm tag)<br>4) ವೃತ್ತದ ಸುತ್ತ ಬೆನ್ನಟ್ಟುವುದು (Circle pursuit)<br>5) ಕ್ರಸ್ಟ್ ಅಂಡ್ ಕ್ರಂಬಲ್<br>6) ಬ್ಲೈಂಡ್ ಮ್ಯಾನ್ಸ್ ಬಫ್<br>7) ಕ್ರಾಸ್ ಟ್ಯಾಗ್ (ಅಡ್ಡಡ್ಡ ಓಡಿ ಮುಟ್ಟುವ ಆಟ)<br>8) ಇಮಿಟೇಶನ್ ಟ್ಯಾಗ್ (ಅನುಕರಣ ಮುಚ್ಚಾಟ)<br>ಬ) ಮಜಲು ಓಟದ ಆಟಗಳು (Relay games)<br>1) ರಕ್ಷಣಾ ಮಜಲು ಓಟ (Rescue relay)<br>2) ದೌಡೋಡುವುದು (Galloping)<br>3) ಕಾಂಗರೂ ಮಜಲು<br>4) ಬಾತುಕೋಳಿ ನಡಿಗೆ<br>5) ಕಪ್ಪೆ ಜಿಗಿತ<br>6) ಓಟದ ಮಜಲು<br>ಕ) ಹೋರಾಡುವ ಆಟಗಳು (Combatives)<br>1) ಕಾಲಿನ ಕುಸ್ತಿ<br>2) ವೃತ್ತದ ಒಳಗೆ ಎಳೆದುಕೊಳ್ಳುವುದು<br>3) ವೃತ್ತದ ಹೊರಗೆ ದಬ್ಬುವುದು<br>4) ಕಾಠಿ ಕುಸ್ತಿ (Wand Wrestle) | - ವಿದ್ಯಾರ್ಥಿಗಳನ್ನು ಆಡಲು ಬಿಡುವುದು<br>-ಶಿಕ್ಷಕ ಅಥವಾ ನಾಯಕನು ನಿರ್ಣಾಯಕನಾಗಿರಬೇಕು |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|
| | **V. ಮನೋರಂಜಕ ಚಟುವಟಿಕೆಗಳು**<br>ಅ) ಹತ್ತಿರದ ಸ್ಥಳಗಳಿಗೆ ಅಲ್ಪಕಾಲಾವಧಿಯ ಪ್ರವಾಸಗಳನ್ನು ಮತ್ತು ವನಭೋಜನಗಳನ್ನು (Picnic) ಏರ್ಪಡಿಸಬೇಕು<br><br>ಬ) ಕಥಾಭಿನಯ-ಹಿಂದಿನ ತರಗತಿಯಲ್ಲಿದ್ದಂತೆ ಹೆಚ್ಚಿನ ದಕ್ಷತೆಯೊಡನೆ ಮುಂದುವರಿಸುವುದು.<br>ಕ) ಗುಂಪು ಗೀತೆಗಳು-ಹಿಂದಿನ ತರಗತಿಯಲ್ಲಿದ್ದಂತೆ ಹೆಚ್ಚಿನ ದಕ್ಷತೆಯೊಡನೆ ಮುಂದುವರಿಸುವುದು<br>**ಆರೋಗ್ಯ ಶಿಕ್ಷಣ (4ನೇ ತರಗತಿ)** | - ಇಡೀ ಶಾಲೆಗೆ ಅಥವಾ ತರಗತಿಗೆ ಪ್ರವಾಸಗಳನ್ನು ಮತ್ತು ವನ ಭೋಜನಗಳನ್ನು ಏರ್ಪಡಿಸಬೇಕು<br>- ಪ್ರತೀ ವರ್ಷದ ಮೊದಲರ್ಧದಲ್ಲಿ 2 ವನಭೋಜನಗಳನ್ನು ಮತ್ತು ಎರಡನೇಯ ಅರ್ಧದಲ್ಲಿ 2 ವನಭೋಜನಗಳನ್ನು ಏರ್ಪಡಿಸುವುದು ಉತ್ತಮ<br>- ಶಿಸ್ತು ಸುರಕ್ಷತೆ ಮತ್ತು (ಮಾನಸಿಕ ಹಾಗೂ ದೈಹಿಕ) ಆರೋಗ್ಯಗಳ ಕಡೆಗೆ ವಿದ್ಯಾರ್ಥಿಗಳ ಗಮನ ಸೆಳೆಯಬೇಕು |
| | **VI ಅ) ಆಹಾರ** | |
| 3 3.1.3.2. ತರಗತಿ 1 ರಲ್ಲಿದ್ದಂತೆ | 1) ಆರೋಗ್ಯವಂತರಿಗೆ ಸೂಕ್ತವಾದ ಆಹಾರ ಮತ್ತು ರೋಗಿಗಳಿಗೆ ಸೂಕ್ತವಾದ ಆಹಾರಗಳ ನಡುವಿನ ವ್ಯತ್ಯಾಸಗಳನ್ನು ಗುರುತಿಸುವುದು ಮತ್ತು ತಿಳಿಯಪಡಿಸುವುದು.<br>2) ಸ್ಥಳೀಯವಾಗಿ ದೊರೆಯುವ ಆಹಾರ ಪದಾರ್ಥಗಳ ಪೌಷ್ಟಿಕಾಂಶಗಳನ್ನು ಅರಿಯುವುದು ಮತ್ತು ಆಹಾರವನ್ನು ದುಂದುಮಾಡುವುದು ತಪ್ಪಿಸುವ ವಿಧಾನಗಳ ಅರಿವನ್ನು ಮೂಡಿಸುವುದು.<br>3) ಸರಿಯಾಗಿ ಆಹಾರವನ್ನು ಸೇವಿಸುವ ಸಲುವಾಗಿ ಈ ಕೆಳಗಿನ ಅಭ್ಯಾಸಗಳನ್ನು ಮಾಡಿಕೊಳ್ಳುವಂತೆ ತಿಳಿಯಪಡಿಸುವುದು<br>ಅ) ನಿಗದಿಯಾದ ವೇಳೆಯಲ್ಲಿ ಆಹಾರ ಸೇವಿಸುವುದು ಮತ್ತು ಸಂತಸಚಿತ್ತರಾಗಿ ಚಿಂತೆಯಿಲ್ಲದೆ ಸಾವಧಾನವಾಗಿ ಆಹಾರ ಸೇವಿಸುವುದು. | - ಸ್ಥಳೀಯವಾಗಿ ದೊರೆಯುವ ಆಹಾರ ಪದಾರ್ಥಗಳನ್ನು ಉಪಯೋಗಿಸಿ ಚರ್ಚಿಸಿ<br><br>- ಪ್ರತಿಯೊಂದು ಪ್ರಸ್ತುತ ಸಂದರ್ಭದಲ್ಲಿ ಈ ಅಭ್ಯಾಸಗಳಿಗೆ ಒತ್ತು ನೀಡುವುದು. |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|
| | ಬ) ಎರಡು ಊಟಗಳ ನಡುವೆ ಅತಿ ಕಡಿಮೆ (ತಿಂಡಿಗಳನ್ನು) ತಿನ್ನುವುದು | |
| | ಕ) ಅತಿಯಾಗಿ ತಿನ್ನದಿರುವುದು | |
| | ಡ) ಶಾಲೆಯಲ್ಲಿ ಮತ್ತು ಸಮುದಾಯದಲ್ಲಿ ಆಹಾರವನ್ನು ಧೂಳು ನೊಣ ಇತ್ಯಾದಿಗಳಿಂದ ಸಂರಕ್ಷಿಸಿಟ್ಟಿರುವ ವಿಧಾನಗಳನ್ನು ಗಮನಿಸುವುದು | |
| | ಇ) ತರಕಾರಿ, ಆಹಾರ ಧಾನ್ಯ ಹಣ್ಣು ಇತ್ಯಾದಿಗಳನ್ನು ಬೆಳೆಯುವ ಚಟುವಟಿಕೆಗಳಲ್ಲಿ ಭಾಗವಹಿಸುವುದು ಮತ್ತು ಅಂತಹ ಚಟುವಟಿಕೆಗಳನ್ನು ವೀಕ್ಷಿಸುವುದು. | |
| | **ಬ) ನೀರು** | |
| | 1) ಸುತ್ತಮುತ್ತಲಿನ ಪರಿಸರದಲ್ಲಿ ನೀರಿನ ಮೂಲಗಳನ್ನು ಶುಚಿಯಾಗಿಡಲು ಅನುಸರಿಸುವ ಚಟುವಟಿಕೆಗಳನ್ನು ವೀಕ್ಷಿಸುವುದು | -ಮೇಲಿನಂತೆ |
| | 2) ನೀರನ್ನು ಶುದ್ಧೀಕರಿಸಲು ಪಟಿಕ (Alum) ಮತ್ತು ಪೊಟ್ಯಾಸಿಯಂ ಪರಮ್ಯಾಂಗನೇಟನ್ನು ಉಪಯೋಗಿಸುವುದು | |
| | **ಕ) ಗಾಳಿ-ಇಲ್ಲ** | |
| | **ಡ) ವೈಯಕ್ತಿಕ ಆರೋಗ್ಯ** | |
| | 1) ಈ ಕೆಳಗಿನ ಆರೋಗ್ಯದ ಅಭ್ಯಾಸಗಳನ್ನು ಮಾಡಿಕೊಳ್ಳುವುದು | - ಮೇಲಿನಂತೆ |
| | ಅ) ಪ್ರತಿಸಲ ಕಕ್ಕಸ್ಸಿಗೆ ಹೋಗಿ ಬಂದ ನಂತರ ಕೈಕಾಲುಗಳನ್ನು ತೊಳೆಯುವುದು | |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|
| | ಬ) ಪ್ರತಿದಿನ ಸ್ನಾನ ಮಾಡುವುದು | |
| | ಕ) ದಿನಕ್ಕೆರಡು ಸಲ ಹಲ್ಲುಜ್ಜುವುದು | |
| | ಡ) ಪ್ರತಿ ದಿನಗಳ ಒಳ ಉಡುಪುಗಳನ್ನು ಒಗೆಯುವುದು | |
| | ಇ) ಶುದ್ಧವಾದ ನೀರನ್ನು ಕುಡಿಯುವುದು | |
| | ಫ) ಕುಳಿತುಕೊಳ್ಳುವ ಸ್ಥಳವನ್ನು ಶುಚಿ ಮಾಡುವುದು | |
| | ಗ) ಬರಿಗಾಲಿನಿಂದ ಓಡಾಡದಿರುವುದು | |
| | ಹ) ರೋಗ ನಿರೋಧತೆಗಾಗಿ ಇರುವ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳುವುದು | |
| | ಐ) ಕಣ್ಣು ಚರ್ಮ ಇತ್ಯಾದಿಗಳ ಸಾಂಕ್ರಾಮಿಕ ರೋಗಗಳಿರುವವರ ಬಟ್ಟೆ ಇತ್ಯಾದಿಗಳನ್ನು ಉಪಯೋಗಿ ಸದಿರುವುದು | |
| | **ಇ. ಸಮುದಾಯದ ಆರೋಗ್ಯ** | ಮೇಲಿನಂತೆ |
| 3.3 ಸಮುದಾಯದ ಆರೋಗ್ಯವನ್ನು ಕಾಪಾಡುವಲ್ಲಿ ಒಬ್ಬನ ಪಾತ್ರದ ಅರಿವನ್ನು ಮೂಡಿಸುವುದು | 1) ಶಾಲೆಯಲ್ಲಿನ ಶೌಚ ಸೌಲಭ್ಯವನ್ನು ಸೂಕ್ತವಾಗಿ ಉಪಯೋಗಿಸುವುದು ಮತ್ತು ಆ ರೀತಿ ಉಪಯೋಗಿಸುವುದನ್ನು ಅಭ್ಯಾಸ ಮಾಡಿಕೊಳ್ಳುವುದು ಹಾಗೂ ಅದನ್ನು ಉಪಯೋಗಿಸಿಕೊಳ್ಳಲು ಗೆಳೆಯರಿಗೆ ನೆರವಾಗುವುದು. | |
| | 2) ಶಾಲಾವರಣದ ಸ್ವಚ್ಛತೆಯ ಕಾರ್ಯದಲ್ಲಿ ಭಾಗವಹಿಸುವುದು ಮತ್ತು ಆ ಚಟುವಟಿಕೆಯ ನಂತರ ಕೈಗಳನ್ನು ತೊಳೆದುಕೊಳ್ಳುವುದು | - ಪ್ರತಿದಿನ ಪ್ರಾರ್ಥನೆಯ ನಂತರ ಸರದಿಯಂತೆ ಒಂದೊಂದು ಗುಂಪು ಸ್ವಚ್ಛತೆಯ ಕಾರ್ಯವನ್ನು ಕೈಗೊಳ್ಳಬೇಕು. |
| | 3) ಕೆಸರು, ಮರಳು ಇತ್ಯಾದಿಗಳನ್ನು ಉಪಯೋಗಿಸಿ ಸಾಮೂಹಿಕ ಮೂತ್ರವಿಸರ್ಜನೆಯ ಮತ್ತು ಮಲವಿಸರ್ಜನೆಯ ಸ್ಥಳಗಳನ್ನು ಶುದ್ಧವಾಗಿಡುವ ಕ್ರಮಗಳನ್ನು ಅನುಸರಿಸುವುದು. | - ಸ್ವಚ್ಛತೆಯ ಕಾರ್ಯದ ಒಂದು ಚಾರ್ಟನ್ನು ತಯಾರಿಸಬೇಕು ಮತ್ತು ಸರದಿಯಂತೆ ಪ್ರತಿಯೊಬ್ಬರೂ ಎಲ್ಲ ಅನುಭವಗಳನ್ನು ಪಡೆಯುವಂತೆ ಆ ಚಾರ್ಟನ್ನು ಅನುಸರಿಸುವುದು. |

| ಸಾಮರ್ಥ್ಯ / ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ / ಚಟುವಟಿಕೆ |
|---|---|---|
| | 4) ಸಮುದಾಯದ ಆರೋಗ್ಯಕ್ಕಾಗಿ ಗ್ರಾಮಪಂಚಾಯತಿಗಳು ಅನುಸರಿಸುವ ಕ್ರಮಗಳನ್ನು ವೀಕ್ಷಿಸುವುದು. | ಅನುಸರಿಸುವುದು |
| | 5) ಗಾಳಿಯಾಡಲು ಮತ್ತು ಬೆಳಕು ಬರುವುದಕ್ಕಾಗಿ ತರಗತಿಯ ಕಿಟಕಿಗಳನ್ನು ತೆರೆದಿಡುವುದು. | - ಗ್ರಾಮ ಪಂಚಾಯತಿಗಳಿಗೆ ಭೇಟಿ ನೀಡುವುದು. |
| | **VII. ಸುರಕ್ಷತಾ ಕ್ರಮಗಳು ಮತ್ತು ಪ್ರಥಮ ಚಿಕಿತ್ಸೆ** | - ಚಿತ್ರಗಳು, ಚಾರ್ಟುಗಳು ಮತ್ತು ನಿರಂತರ ನಿರ್ದೇಶನಗಳ ಮೂಲಕ |
| 4. ಉತ್ತಮ ಆರೋಗ್ಯ ಬೆಳೆಸಲು ಮತ್ತು ಕಾಪಾಡಲು ಸುರಕ್ಷತಾ ಕ್ರಮಗಳ ಮತ್ತು ಪ್ರಥಮ ಚಿಕಿತ್ಸೆಯ ಮಹತ್ವವನ್ನು ಅರಿಯುವುದು. | 1) ಬೆಂಕಿ, ನದಿ, ಬಾವಿ, ಹೊಂಡಗಳು, ವಿದ್ಯುಚ್ಛಕ್ತಿ ಮುಂತಾದ ಇತರ ವಸ್ತುಗಳಿಂದ ಸುರಕ್ಷಿತವಾಗಿರುವಷ್ಟು ದೂರದಲ್ಲಿರುವುದು.<br>2) ಹೆದ್ದಾರಿಗಳಲ್ಲಿ ರಸ್ತೆಗಳಲ್ಲಿ ಮತ್ತು ಓಣಿಗಳಲ್ಲಿ ಸುರಕ್ಷಿತ ಪಕ್ಕದಲ್ಲಿ (ಎಡ ಪಕ್ಕದಲ್ಲಿ) ನಡೆಯುವುದು. | |
| 4.1 ತನ್ನ ಸುತ್ತಲಿನ ಕೆಡುಕುಂಟು ಮಾಡುವ ಸನ್ನಿವೇಶಗಳ ಬಗ್ಗೆ ಮತ್ತು ಆ ಬಗ್ಗೆ ತೆಗೆದು ಕೊಳ್ಳಬೇಕಾದ ಮುನ್ನೆಚ್ಚರಿಕೆಗಳ ಬಗ್ಗೆ ಮಗುವಿಗೆ ಅರಿವುಂಟು ಮಾಡುವುದು. | 3) ಚಾಕು, ಬ್ಲೇಡು, ಸೂಜಿ, ಒಡೆದ ಗಾಜಿನ ತುಂಡು, ಪಿನ್ನು ಮುಂತಾದ ಚೂಪಾದ ವಸ್ತುಗಳ ಜೊತೆ 'ಆಟವಾಡದಿರುವುದು'.<br>4) ಹಾಳೆ, ಬಟ್ಟೆ ಮುಂತಾದವುಗಳಿಗೆ ಹತ್ತಿರ ಬೆಂಕಿ ಆರಿಸುವಾಗ ಪ್ರಥಮ ಚಿಕಿತ್ಸೆಯ ಕ್ರಮಗಳನ್ನು ಉಪಯೋಗಿಸುವುದು. ಬೆಂಕಿಯಿಂದ ಸುಟ್ಟುಕೊಂಡಾಗ, ಬೊಬ್ಬೆಗಳೆದ್ದಾಗ, ಕೊಯ್ದುಕೊಂಡಾಗ, ಹುಳುಗಳು ಕಡಿದಾಗ, ಕಣ್ಣಿನಲ್ಲಿ ಧೂಳು ಬಿದ್ದಾಗ ಪ್ರಥಮ ಚಿಕಿತ್ಸೆ ನೀಡುವುದು. | - ಮೇಲಿನಂತೆ |
| 4.2 ಪ್ರಥಮ ಚಿಕಿತ್ಸೆಗೆ ಸಂಬಂಧಿಸಿದಂತೆ ಪೂರಕ ಚಟುವಟಿಕೆಗಳ ಪರಿಚಯ ಮಾಡಿಕೊಡುವುದು. | ಹೆಚ್ಚಿನ ಮಟ್ಟದ ಪ್ರಥಮ ಚಿಕಿತ್ಸೆ ಹಿರಿಯರಿಗೆ ನೆರವು ನೀಡುವುದು. | |

| 5. ತರಗತಿವಾರು ದೈಹಿಕ ಶಿಕ್ಷಣ ಮತ್ತು ಆರೋಗ್ಯ ಶಿಕ್ಷಣ ಪಠ್ಯವಸ್ತು (ತರಗತಿ-5) | | |
|---|---|---|
| **ಸಾಮರ್ಥ್ಯ/ ಉಪಸಾಮರ್ಥ್ಯ** | **ದೈಹಿಕ ಶಿಕ್ಷಣ ಬೋಧನೆಯ ಅಭ್ಯಾಸ ಪತ್ರಿಕೆಯ ವಿವರ** | **ಮಾರ್ಗೋಪಾಯ/ ಚಟುವಟಿಕೆ** |
| | 1) ಅನೌಪಚಾರಿಕ ಚಟುವಟಿಕೆಗಳು<br>ಉಪಘಟಕ 1 ಸ್ವತಂತ್ರ ಚಲನೆ (08)<br>**ವ್ಯಾಯಾಮ ಪಟ್ಟಿ-1** | |
| 1) ದೈಹಿಕವಾಗಿ ಮಾನಸಿಕವಾಗಿ ಸಾಮಾಜಿಕವಾಗಿ ಮತ್ತು ಅಧ್ಯಾತ್ಮಿಕವಾಗಿ ಸದೃಢವಾಗಿ ಬೆಳೆಯುವಂತೆ ಅಭಿವೃದ್ಧಿಗೊಳಿಸುವುದು. | 1) **ಪೀಠಿಕಾ ರೂಪ:** ಸ್ವತಂತ್ರವಾಗಿ ಹಗ್ಗದ ಸಹಾಯದಿಂದ ಜಿಗಿಯುವುದು.<br>2) **ಕೈಗಳಿಗೆ:** (ಕೈಗಳು ಪಕ್ಕಕ್ಕೆ ಚಾಚಿರಲಿ) ಕೈಗಳನ್ನು ವೃತ್ತಾಕಾರವಾಗಿ ತಿರುಗಿಸಬೇಕು. | ಶಿಕ್ಷಕರ ಮಾರ್ಗದರ್ಶನದಲ್ಲಿ ಮಕ್ಕಳು ಕಲಿತು, ನಂತರ ಸೀಟಿಗೆ ಅನುಗುಣವಾಗಿ ಮಾಡುವುದು. |
| 2) ದೈಹಿಕ ಸಾಮರ್ಥ್ಯದಲ್ಲಿ ಕೈಗಳಿಗೆ ವ್ಯಾಯಾಮ | 3) **ಸೊಂಟಕ್ಕೆ:** ಅ)ಕಾಲುಗಳನ್ನು ಕತ್ತರಿ ಹಾಕಿಕೊಂಡು ಕೂಡುವುದು. ಸೊಂಟ ಮತ್ತು ಕತ್ತನ್ನು ತಿರುಗಿಸುತ್ತ ಕೈಗಳನ್ನು ತೂಗಾಡಿಸಿಕೊಂಡು ಹಿಂದಕ್ಕೆ ನೋಡುತ್ತಾ ನೆಲವನ್ನು ಮುಟ್ಟಬೇಕು. | ಪ್ರತಿಯೊಂದು ವ್ಯಾಯಾಮವನ್ನು ಶಿಕ್ಷಕರು ಮಕ್ಕಳಿಗೆ ತೋರಿಸಿ ನಂತರ ಅವರ ಮಾರ್ಗದರ್ಶನದಂತೆ ಮಕ್ಕಳು ಮಾಡುವರು. |
| 3) ಸೊಂಟಕ್ಕೆ ವ್ಯಾಯಾಮ ಮಾಡುವುದರಿಂದ ಸೊಂಟ ಬಲಗೊಳ್ಳುವುದು. | ಬ) ಪಾದಗಳನ್ನು ದೂರವಿಟ್ಟಿರಬೇಕು. ಒಬ್ಬರಿಗೊಬ್ಬರು ಒಂದು ಗಜದೂರದಲ್ಲಿ ವಿರುದ್ಧ ದಿಕ್ಕುಗಳಿಗೆ ಮುಖ ಮಾಡಿ ನಿಂತು ದೇಹವನ್ನು ಮುಂದಕ್ಕೆ ಬಗ್ಗಿಸಿ, ಕಾಲುಗಳ ಮಧ್ಯಭಾಗದಿಂದ ಟೆನ್ನಿಸ್ ಚೆಂಡನ್ನು ಒಬ್ಬರಿಗೊಬ್ಬರು ಕೊಡುವುದು. ಬೆನ್ನನ್ನು ಕಮಾನಿನಂತೆ ಬಗ್ಗಿಸಿ, ಎರಡೂ ಕೈಗಳಿಂದ ಚೆಂಡನ್ನು ತಲೆಯ ಮೇಲಿನಿಂದ ಕೂಡುವುದು. | -ಅದೇ- |
| 4) ಪಾದಗಳಿಗೆ ವ್ಯಾಯಾಮ.<br>5) ಸಮತೋಲನ | 4) **ಕಾಲುಗಳಿಗೆ:** (ಹಸ್ತಗಳಿಂದ ಸೊಂಟವನ್ನು ಹಿಡಿದಿರಬೇಕು) ಪಾದಗಳನ್ನು ದೂರವಿಟ್ಟು ತಾಳಬದ್ಧವಾಗಿ ಜಿಗಿಯುತ್ತಿರಬೇಕು. | -ಅದೇ- |

| ಸಾಮರ್ಥ್ಯ/ ಉಪಸಾಮರ್ಥ್ಯ | | ದೈಹಿಕ ಶಿಕ್ಷಣ ಬೋಧನೆಯ ಅಭ್ಯಾಸ ಪತ್ರಿಕೆಯ ವಿವರ | ಮಾರ್ಗೋಪಾಯ/ ಚಟುವಟಿಕೆ |
|---|---|---|---|
| | | 5) **ಸಮತೋಲನ:** ಮುಂದಕ್ಕೆ ಬಾಗಿ, ಕೈಗಳಿಂದ ಕಾಲಿನ ಹರಡುಗಳನ್ನು ಹಿಡಿದು ನಡೆಯಬೇಕು. | |
| | | **ವ್ಯಾಯಾಮ ಪಟ್ಟ-2** | |
| 1) | ತಲೆಗೆ ವ್ಯಾಯಾಮ | 1) **ಪೀಠಿಕಾ ರೂಪ:** ವೃತ್ತದ ಮೇಲೆ ಓಡುತ್ತಾ ತಲೆಯಿಂದ ಅಂದರೆ ಹಣೆಯ ಮೇಲ್ಭಾಗದಿಂದ ಚೆಂಡನ್ನು ಮೇಲು ಮೇಲಕ್ಕೆ ತಳ್ಳಲು ಪ್ರಯತ್ನಿಸುವುದು. | ಶಿಕ್ಷಕರು ಮೊದಲು ಮಕ್ಕಳಿಗೆ ವಿಷಯವನ್ನು ಸ್ವತ: ಮಾಡಿ ತಿಳಿಸಿ ಮಕ್ಕಳಿಂದ ಮಾಡಿಸುವುದು. |
| 2) | ಕೈಗಳಿಗೆ ವ್ಯಾಯಾಮ | 2) **ಕೈಗಳಿಗೆ:** (ಜೊತೆ ಜೊತೆಯಾಗಿ ಬಲಗೈಗಳನ್ನು ಸೇರಿಸಿರಬೇಕು). ಜೊತೆಗಾರನನ್ನು ತಮ್ಮ ಕಡೆಗೆ ಎಳೆದುಕೊಳ್ಳಲು ಪ್ರಯತ್ನಿಸಬೇಕು. ಇದೇ ರೀತಿ ಎಡಗೈಯನ್ನು ಹಿಡಿದು ಎಳೆಯಲು ಅಭ್ಯಾಸ ಮಾಡಬಹುದು. | |
| 3) | ಸೊಂಟಕ್ಕೆ ವ್ಯಾಯಾಮ | 3) **ಸೊಂಟಕ್ಕೆ:** ಅ) (ಮೊಣಕಾಲುಗಳನ್ನು ಊರಿರಬೇಕು) ಸೊಂಟವನ್ನು ಮುಂದಕ್ಕೆ ಬಗ್ಗಿಸಿ ಕೈಗಳನ್ನು ನೆಲಕ್ಕೆ ತಾಕಿಸಿರಬೇಕು. ಭುಜದ ಭಾಗವನ್ನು ಸಾಧ್ಯವಾದಷ್ಟು ಅಗಲ ಮಾಡಿರಬೇಕು) ಕೈಗಳನ್ನು ನೇರವಾಗಿರಿಸಿಕೊಂಡು ಎದೆಯ ಭಾಗವನ್ನು ತಾಳಬದ್ಧವಾಗಿ ಮುಂದಕ್ಕೆ ತಳ್ಳಬೇಕು | -ಅದೇ- |
| | | ಬ) (ಕಾಲುಗಳನ್ನು ದೂರವಿಟ್ಟಿರಬೇಕು) ಸೊಂಟವನ್ನು ಒಂದು ಪಕ್ಕದಿಂದ ಮತ್ತೊಂದು ಪಕ್ಕಕ್ಕೆ ಬಾಗಿಸಬೇಕು. | ಮೇಲಿನಂತೆ |
| 4) | ಕಾಲುಗಳಿಗೆ ವ್ಯಾಯಾಮ ಮಾಡುವುದರಿಂದ ಕಾಲುಗಳಿಗೆ ಶಕ್ತಿಯು ದೊರೆಯುತ್ತದೆ | 4) **ಕಾಲುಗಳಿಗೆ:** ಒಂದಾದ ಮೇಲೊಂದು ಮೊಣ ಕಾಲುಗಳನ್ನು ಮೇಲಕ್ಕೆತ್ತುವ ನಿಂತಲ್ಲಿಯೇ ಕುಪ್ಪಳಿಸುವುದು. | ಕುಪ್ಪಳಿಸುವುದು ಮತ್ತು ಜಿಗಿಯುವುದರ ಬಗ್ಗೆ ಶಿಕ್ಷಕರು |
| | ಮೊದಲು ಮಾರ್ಗದರ್ಶನದಿಂದ | 5) **ಸಮತೋಲನ:** (ವಿಮಾನದ ರೀತಿ) ಒಂದು ಕಾಲ ಮೇಲೆ ನಿಂತು ಮತ್ತೊಂದು ಕಾಲನ್ನು ಹಿಂದಕ್ಕೆ ನೇರ ಮಾಡಿ ಕೈಗಳನ್ನು ಪಕ್ಕಕ್ಕೆ ಚಾಚಿ | ಮಾಡಿ ತೋರಿಸುವುದು ಹಾಗೂ ಶಿಕ್ಷಕರು ಮಕ್ಕಳು ಮಾಡುವುದು. |

| ಸಾಮರ್ಥ್ಯ/ ಉಪಸಾಮರ್ಥ್ಯ | | ದೈಹಿಕ ಶಿಕ್ಷಣ ಬೋಧನೆಯ ಅಭ್ಯಾಸ ಪತ್ರಿಕೆಯ ವಿವರ | ಮಾರ್ಗೋಪಾಯ/ ಚಟುವಟಿಕೆ |
|---|---|---|---|
| | | ಸೊಂಟವನ್ನು ಮುಂದಕ್ಕೆ ಬಾಗಿಸಿ ಸಮಾನಾಂತರ ಸ್ಥಿತಿಯಲ್ಲಿ ನಿಲ್ಲುವುದು. | |
| | | **ವ್ಯಾಯಾಮ ಪಟ್ಟ-3** | |
| | | 1) **ಪೀಠಿಕಾ ರೂಪ:** ಸ್ವತಂತ್ರವಾಗಿ ಕುಪ್ಪಳಿಸುವುದು. ಸ್ವತಂತ್ರವಾಗಿ ಹೆಜ್ಜೆ ಇಡುವುದು ಮತ್ತು ಸ್ವತಂತ್ರವಾಗಿ ಜಿಗಿಯುವುದು. | |
| | | 2) **ಕೈಗಳಿಗೆ:** ಕೈಗಳನ್ನು ಮಡಿಚುವುದು ಮತ್ತು ಮೇಲಕ್ಕೆತ್ತಿ ನೇರ ಮಾಡುವುದು. | |
| ಸೊಂಟಕ್ಕೆ ವ್ಯಾಯಾಮ ಇದರಿಂದ ಸೊಂಟವು ಬಲಗೊಳ್ಳುವುದು. | | **ಸೊಂಟಕ್ಕೆ:** ಅ) (ಪಾದಗಳನ್ನು ದೂರವಿಟ್ಟುಕೊಂಡು ನಿಲ್ಲುವುದು) ಕಮಾನಿನ ಆಕಾರದಲ್ಲಿ ಬೆನ್ನನ್ನು ಬಾಗಿಸಿ ಕೈಗಳನ್ನು ಬಲಭಾಗಕ್ಕೆ ತಿರುಗಿಸುತ್ತ ಸೊಂಟವನ್ನು ಸಡಿಲಬಿಟ್ಟು ಮುಂದಕ್ಕೆ ಬಾಗುವುದು. ಇದೇ ರೀತಿ ವಿರುದ್ಧ ದಿಕ್ಕಿನಿಂದ ಮಾಡುವುದು. ಪದೇ ಪದೇ ಮಾಡುವುದು. | ಅ) ಶಿಕ್ಷಕರು ಮೊದಲು ಮಾಡಿ ತೋರಿಸಿ ಮಕ್ಕಳಿಂದ ಮಾಡಿಸುವುದು. |
| | | ಬ) (ಬಲಗೈಯನ್ನು ಹಸ್ತವೂ ಭೂಮಿಗೆ ಅಭಿಮುಖವಾಗಿರುವಂತೆ ಮುಂದೆ ಚಾಚುವುದು.) | -ಅದೇ- |
| 4) | ಕಾಲುಗಳಿಗೆ ವ್ಯಾಯಾಮ ಮಾಡುವುದರಿಂದ ಮೊಣಕಾಲುಗಳಿಗೆ ವಿವಿಧ ರೀತಿಯಲ್ಲಿ ವ್ಯಾಯಾಮ ದೊರಕಿ ಮೊಣಕಾಲುಗಳ ಅಭಿವೃದ್ಧಿಗೊಳಿಸುವುದು. | ಮೊಣಕಾಲನ್ನು ಬಗ್ಗಿಸದೆ, ಎಡಗಾಲಿನಿಂದ ಚಾಚಿದ ಕೈಗೆ ತಾಗುವಂತೆ ಒದೆಯಬೇಕು. ಇದೇ ರೀತಿ ಮತ್ತೊಂದು ಕೈ ಹಾಗೂ ಕಾಲಿನಿಂದ ಮಾಡುವುದು. ಆದಷ್ಟು ಎತ್ತರಕ್ಕೆ ಕಾಲನ್ನು ಎತ್ತಿ ಚಾಚಿದ ಕೈಗೆ ತಾಕಿಸಬೇಕು. | 4) ಶಿಕ್ಷಕರ ಮಾರ್ಗದರ್ಶನದಲ್ಲಿ ಮಕ್ಕಳು ಮಾಡುವುದು. |
| | | 4) **ಕಾಲುಗಳಿಗೆ:** ಎಣಿಕೆ ಪ್ರಕಾರ ಜಿಗಿದು ಕಾಲುಗಳನ್ನು ಅಗಲಿಸಿ, ನೆಲದ ಮೇಲೆ ಮೊಣಕಾಲುಗಳನ್ನು ಮಣಿಸಿ ಬೆನ್ನನ್ನು ಬಾಗಿಸಿ ಅರ್ಧ ಕುಳಿತುಕೊಳ್ಳುವುದು. (ಕ್ರೌಚ್ ಸ್ಥಿತಿ) ಪದೇ ಪದೇ ಇದೇ ರೀತಿ ಜಿಗಿಯುತ್ತಿರುವುದು. | |

| ಸಾಮರ್ಥ್ಯ / ಉಪಸಾಮರ್ಥ್ಯ | ದೈಹಿಕ ಶಿಕ್ಷಣ ಬೋಧನೆಯ ಅಭ್ಯಾಸ ಪತ್ರಿಕೆಯ ವಿವರ | ಮಾರ್ಗೋಪಾಯ / ಚಟುವಟಿಕೆ |
| --- | --- | --- |
| 5) ಸಮತೋಲನವನ್ನು ಕಾಪಾಡುವುದು. | 5) ಸಮತೋಲನ : ಒಂದು ಕಾಲ ಮೇಲೆ ನಿಂತು. ಮತ್ತೊಂದು ಕಾಲಿನ ಮಂಡಿಯನ್ನು ಎತ್ತಿ ಎರಡೂ ಕೈಗಳಿಂದ ಹಿಡಿದು, ಮೇಲಕ್ಕೆ ಜಿಗಿದು ತಿರುಗುವುದು ಕೈಗಳನ್ನು ಬಿಡಬಾರದು ಆಯ ತಪ್ಪದಂತೆ ಇರಬೇಕು. | 5) ಸಮತೋಲನ ಯಾವ ರೀತಿ ದೊರಕುತ್ತದೆ ಎಂಬುದನ್ನು ಶಿಕ್ಷಕರು ಮಕ್ಕಳಿಗೆ ಮನವರಿಕೆ ಮಾಡುವುದು. |
| | **ಉಪಘಟಕ 2 ಅದ್ಭುತ ಶಕ್ತಿ ಪ್ರದರ್ಶನ, ಉರುಳುವುದು (4 ಅವಧಿ)**<br>1) (ಜೋಡಿಯಾಗಿ) ಕಪ್ಪೆಯಂತೆ ಕುಪ್ಪಳಿಸಿ ಉರುಳುವುದು.<br>2) ಮೂರುರುಳು ಉರುಳುವುದು (ಮೂರು ಮಂದಿ ಒಟ್ಟಿಗೆ)<br>3) ಜಿಗಿದು ಉರುಳುವುದು.<br>4) ಎರಡು ಬಾರಿ ಉರುಳುವುದು (ಒಂಟಿಯಾಗಿ ಮತ್ತು ಜೋಡಿಯಾಗಿ)<br>5) ಬೆನ್ನ ಮೇಲೆ ಹಿಂದಕ್ಕೆ ಉರುಳುವುದು. | ಮೇಲಾಟಗಳ ಬಗ್ಗೆ ಮಕ್ಕಳಿಗೆ ಶಿಕ್ಷಕರು ಉತ್ತಮ ತರಬೇತಿ ನೀಡುವುದರ ಮೂಲಕ 100ಮೀ. ಓಟದ ಕೌಶಲ್ಯತೆಗಳನ್ನು ಮಕ್ಕಳಿಗೆ ತಿಳಿಸುವುದು. |
| | **ಘಟಕ 2 ಮೇಲಾಟಗಳು ಉಪಘಟಕ 1 ಮೇಲಾಟ**<br>ಅ) 100 ಮೀ.ಓಟ: 100 ಮೀ ಓಟವು ಆರಂಭದಿಂದ ಮುಕ್ತಾಯದವರೆಗೆ ಪರಮವೇಗದಿಂದ ಓಡುವ ಓಟವಾಗಿದೆ. | |
| 1) ವೇಗದ ಓಟದ ಮೂಲಕ ದೈಹಿಕ ಬೆಳವಣಿಗೆಯನ್ನು ಉತ್ತಮಪಡಿಸುವುದು. | **ವೇಗದ ಓಟದ ತಂತ್ರ:** ಇದನ್ನು ಮೂರು ಭಾಗಗಳಲ್ಲಿ ವಿಂಗಡಿಸಬಹುದು.<br>1) ಆರಂಭ 2) ವೇಗ 3) ಮುಕ್ತಾಯ | ಆರಂಭದ ಓಟದ ಬಗ್ಗೆ ಶಿಕ್ಷಕರು ಮಕ್ಕಳಿಗೆ ತಿಳುವಳಿಕೆ ನೀಡುವುದು. |
| | 1) **ಆರಂಭ:** ವೇಗದ ಓಟಗಳಲ್ಲಿ ಆರಂಭವು ಅತ್ಯಂತಮುಖ್ಯ ಹಂತವಾಗಿದೆ. ತುಪಾಕಿ ಇಲ್ಲವೆ ಪ್ರಾರಂಭಿಕ ಕಟ್ಟೆಗೆಯ ಹಲಗೆಯ ಸಪ್ಪಳದೊಂದಿಗೆ ಚಲನೆ ಆರಂಭಿಸಿ ಅತೀ ಅಲ್ಪಾವಧಿಯಲ್ಲಿಯೇ ಅತೀ ಹೆಚ್ಚು ವೇಗವನ್ನು ಪಡೆಯುಬೇಕಾಗುತ್ತದೆ. ಆರಂಭಿಸುವ ಸ್ಥಿತಿಗಳಲ್ಲಿ ಮೂರು ವಿಧಾನಗಳಿವೆ. | ಮೇಲಿನಂತೆ<br>ಮೇಲಿನಂತೆ |

| ಸಾಮರ್ಥ್ಯ / ಉಪಸಾಮರ್ಥ್ಯ | ದೈಹಿಕ ಶಿಕ್ಷಣ ಬೋಧನೆಯ ಅಭ್ಯಾಸ ಪತ್ರಿಕೆಯ ವಿವರ | ಮಾರ್ಗೋಪಾಯ / ಚಟುವಟಿಕೆ |
| --- | --- | --- |
| | 1) ಬಂಚ, 2) ಮಧ್ಯಮ, 3) ದೀರ್ಘ, ವೇಗದ ಓಟಗಳನ್ನು ನಿಂತ ಸ್ಥಿತಿಯಿಂದ ಆರಂಭಿಸುವುದಕ್ಕಿಂತ ನೆಲಕ್ಕೆ ಸಮವಾಗಿ ಬಾಗಿದ ಸ್ಥಿತಿಯಿಂದ ಆರಂಭಿಸುವುದು ಹೆಚ್ಚು ಸೂಕ್ತ. | ಮೇಲಿನಂತೆ |
| | ಬಂಚ: ಬಲಗಾಲ ಮೊಣಕಾಲನ್ನು ಮುಂದೆ ಸರಿಸಿ ಎಡಗಾಲಿನ ಹಿಮ್ಮಡಿಯ ಹತ್ತಿರ ಬಲಗಾಲದ ತುದಿಗಾಲನ್ನು ಇಡಬೇಕು ಸೆಟ್ ಸ್ಥಿತಿಗೆ ಬಂದಾಗ ಸೊಂಟವು ಭುಜಗಳ ಮಟ್ಟಕ್ಕಿಂತ ಮೇಲಕ್ಕೆ ಇರುವುದು ಇದು ಗಿಡ್ಡ ಓಟಗಾರರಿಗೆ ಅನುಕೂಲವಾಗಿರುವುದು. | ಇವುಗಳ ಬಗ್ಗೆ ಶಿಕ್ಷಕರು ಮಕ್ಕಳಿಗೆ ಉತ್ತಮ ಮಾರ್ಗದರ್ಶನ ನೀಡಿ (ತರಬೇತಿ ನೀಡಿ) ಅವರಿಂದ ಮಾಡಿಸುವುದು.<br>ಮೇಲಿನಂತೆ |
| | **ಮಧ್ಯಮ:** ಬಲಗಾಲ ಮೊಣಕಾಲನ್ನು ಸ್ವಲ್ಪ ಹಿಂದೆ ಸರಿಸಿ, ಎಡಪಾದದ ಮಧ್ಯ ಭಾಗದ ಹತ್ತಿರ ಇಡಬೇಕು. 'ಸೆಟ್' ಸ್ಥಿತಿಗೆ ಬಂದಾಗ ಸೊಂಟವು ಭುಜಗಳ ಮಟ್ಟಕ್ಕಿಂತ ಸ್ವಲ್ಪ ಮೇಲೆ ಬರುವುದು ಇದು ಮಧ್ಯಮರಿಗೆ ಅನುಕೂಲ. | ಉತ್ತಮ ವೇಗಕ್ಕೆ ಪ್ರೇರಕ ಇದರ ಬಗ್ಗೆ ಶಿಕ್ಷಕರು ಮಕ್ಕಳಿಗೆ ತಿಳಿಸುವುದು. |
| | **ದೀರ್ಘ:** ಬಲ ಮೊಣಕಾಲನ್ನು ಸ್ವಲ್ಪ ಹಿಂದೆ ಸರಿಸಿ ಎಡಪಾದದ ಮಧ್ಯಭಾಗದ ಹತ್ತಿರ ಸ್ವಲ್ಪ ಹಿಂದೆ ಇಡಬೇಕು. 'ಸೆಟ್' ಸ್ಥಿತಿಗೆ ಬಂದಾಗ ಸೊಂಟವು ಭುಜಗಳ ಮಟ್ಟಕ್ಕೆ ಬರುವುದು ಇದು ಹೆಚ್ಚು ಎತ್ತರವಿದ್ದವರಿಗೆ ಅನುಕೂಲ. | |
| ದೇಹವು ಶಕ್ತಿಯುತವಾಗಿ ಇರುವುದು ಹಾಗೂ ಉತ್ತಮ ಫಲಿತಾಂಶ ಮಾಡುವುದು ನೆರವಾಗುವುದು | ಅಧಿಕ ಶಕ್ತಿಯುಳ್ಳ ಕಾಲನ್ನು ಮುಂದೆ ಇಡಬೇಕು. ಇದನ್ನು ತಿಳಿದುಕೊಳ್ಳಲು ಮೂರರಿಂದ ನಾಲ್ಕು ಸಲ ಉದ್ದ ಜಿಗಿತ ಮಾಡಬೇಕು. ಯಾವ ಕಾಲಿನಿಂದ ಜಿಗಿಯುವಿರೋ ಅಂದರೆ ಓಡಿ ಬಂದು ಜಿಗಿಯುವ ಮುನ್ನ ಸಾಮಾನ್ಯವಾಗಿ ಯಾವ ಕಾಲನ್ನು ಊರುವಿರೋ ಮತ್ತು ಉತ್ತಮವಾಗಿ ಜಿಗಿಯುವಿರೋ ಆ ಕಾಲು ಅಧಿಕ ಶಕ್ತಿಯುಳ್ಳದ್ದು ಎಂದು ತಿಳಿಯಬೇಕು. | ಶಿಕ್ಷಕನ ಮಾರ್ಗದರ್ಶನದಲ್ಲಿ ಮಕ್ಕಳು ಅಭ್ಯಾಸ ಮಾಡುವುದು. |
| ದೇಹದಾರ್ಢತೆಯನ್ನು ಉತ್ತಮ ಪಡಿಸುವುದು | **ವೇಗ:** ಸಾಮಾನ್ಯ ಓಟಗಾರನು ಪ್ರಾರಂಭಿಕ ಗೆರೆಯಿಂದ 15, 20 ಮೀ. ಅಂತರದಲ್ಲಿ ತನ್ನ ಅತ್ಯಧಿಕ ವೇಗವನ್ನು ಮುಟ್ಟುವುದು. ಈ ಅಂತರದಲ್ಲಿ ಹೆಜ್ಜೆಗಳು ಕ್ರಮವಾಗಿ ಉದ್ದವಾಗುವುವು. ಮೊಣಕಾಲುಗಳನ್ನು ಎತ್ತಿ ತೊಡೆಗಳು ನೆಲಕ್ಕೆ | - ಅದೇ - |

| ಸಾಮರ್ಥ್ಯ / ಉಪಸಾಮರ್ಥ್ಯ | ದೈಹಿಕ ಶಿಕ್ಷಣ ಬೋಧನೆಯ ಅಭ್ಯಾಸ ಪತ್ರಿಕೆಯ ವಿವರ | ಮಾರ್ಗೋಪಾಯ / ಚಟುವಟಿಕೆ |
|---|---|---|
| - ಅದೇ - | ಸಮಾಂತರವಾಗುವಂತೆ ಮೇಲೆ ತರಬೇಕು ಅತೀ ಚಿಕ್ಕ ಹಾಗೂ ಅತೀ ಉದ್ದ ಹೆಜ್ಜೆಗಳನ್ನು ಇಡುವ ಅಗತ್ಯವಿಲ್ಲ ನೆಲವನ್ನು ಮುಂಗಾಲುಗಳಿಂದ ಒತ್ತುತ್ತ ಮುನ್ನುಗ್ಗಬೇಕು. ಕೈಗಳನ್ನು ಮೊಳಕೈಗಳಿಂದ ಮಣಿಸಿ ಹಿಡಿದು ರಭಸದಿಂದ ಹಿಂದೆ-ಮುಂದೆ ಬೀಸುತ್ತಿರಬೇಕು.<br>**ಮುಕ್ತಾಯ:** ವೇಗವನ್ನು ಕುಂಠಿತಗೊಳಿಸದೆ ಪರಮ ವೇಗದಲ್ಲಿ ಮುಕ್ತಾಯದ ಗೆರೆಯನ್ನು ದಾಟಬೇಕು.ಮುಕ್ತಾಯದ ಗೆರೆ ಹತ್ತಿರ ಬಂದಾಗ ಎದೆಯ ಭಾಗವನ್ನು ಮುಂದಕ್ಕೆ ನೂಕಲು ಪ್ರಯತ್ನಿಸಬೇಕು. ಮುಕ್ತಾಯದ ಗೆರೆದಾಟಿದ ನಂತರ ವೇಗವನ್ನು ಕ್ರಮೇಣ ತಗ್ಗಿಸಬೇಕು. | |
| - ಅದೇ - | **: ಎತ್ತರ ಜಿಗಿತ ಗಂಡು ಮಕ್ಕಳಿಗೆ :**<br>ದೇಹದ ಸಮತೋಲ ಕೇಂದ್ರವನ್ನು ಎತ್ತಿ ಅಡ್ಡಕೋಲನ್ನು ದಾಟಿಸುವ ಕಲೆಯೇ ಎತ್ತರ ಜಿಗಿತ ಈ ಕೇಂದ್ರವು ನಾಭಿಯ ಸುತ್ತಲೂ ಇದೆ. ಕತ್ತರಿಗಾಲು ವಿಧಾನದಲ್ಲಿ ಈ ಕೇಂದ್ರವು ಅಡ್ಡಕೋಲಿನಿಂದ 20 ರಿಂದ 24 ಸೆಂ.ಮೀ. ಎತ್ತರವಿರುವುದು ಉಳಿದ ವಿಧಾನಗಳಲ್ಲಿ ಅದು ಕೋಲಿನ ಸಮೀಪವಿರುವುದು. ಎತ್ತರ ಜಿಗಿತವನ್ನು ಮೂರು ಹಂತಗಳಲ್ಲಿ ಅಭ್ಯಾಸ ಮಾಡುವುದು.<br>1) ಓಡಿ ಬರುವುದು, 2) ಉಡ್ಡಾಣ, 3) ಇಳಿಯುವುದು.<br>ಓಡಿ ಬರುವುದು: ಅಡ್ಡಕೋಲಿನ ಸ್ವಲ್ಪ ದೂರದಿಂದ ಓಡುವ ವ್ಯಕ್ತಿಯು ತಡೆ, ತಡೆದು ಓಡುತ್ತಾ ಅಡ್ಡಕೋಲಿನ ಕಡೆಗೆ ಬರಬೇಕು.<br>**ಉಡ್ಡಾಣ :** ಶಕ್ತಿಯುತ ಕಾಲಿನಿಂದ ನೆಲವನ್ನು ರಭಸದಿಂದ ಮೆಟ್ಟಿ ನಾಭಿಯ ಭಾಗದಿಂದ ಅಡ್ಡಕೋಲಿನ ಮೇಲ್ಭಾಗಕ್ಕೆ ನೆಗೆಯಬೇಕು. ಕೈಗಳನ್ನು ಮೇಲ್ಮುಖ ಹಿಡಿದಿರಬೇಕು. | - ಮೇಲಿನಂತೆ - |

| ಸಾಮರ್ಥ್ಯ / ಉಪಸಾಮರ್ಥ್ಯ | ದೈಹಿಕ ಶಿಕ್ಷಣ ಬೋಧನೆಯ ಅಭ್ಯಾಸ ಪತ್ರಿಕೆಯ ವಿವರ | ಮಾರ್ಗೋಪಾಯ / ಚಟುವಟಿಕೆ |
|---|---|---|
| ಕೈಗಳಿಗೆ ಶಕ್ತಿ ತುಂಬುವುದು ಹಾಗೂ ಕಾಲುಗಳಿಗೆ ಶಕ್ತಿಯು ತುಂಬುವುದು. | **ಇಳಿಯುವುದು:** ಎರಡೂ ಕಾಲಿನಿಂದ ಅಥವಾ ಭುಜದ ಹಿಂದಿನ ಭಾಗದಿಂದ ಜಿಗಿತದ ಕಣದಲ್ಲಿ ದೇಹವನ್ನು ಇಳಿಸಬೇಕು. ಈ ಸ್ಥಿತಿಯಲ್ಲಿ ಶರೀರದ ಸಮತೋಲನವನ್ನು ಕಾಯಬೇಕು ಮಾಡುವುದು.<br>**ಸೂಚನೆ:** ಎತ್ತರ ಜಿಗಿತವನ್ನು ರೂಢಿ ಮಾಡಿಸುವಾಗ ಸಾಕಷ್ಟು ಪ್ರಾರಂಭಿಕ ವ್ಯಾಯಾಮಗಳನ್ನು ಮಾಡಿಸಬೇಕು ಮತ್ತು ಅಡ್ಡಕೋಲನ್ನು ಜಿಗಿಯುವ ರೂಢಿಯಲ್ಲಿ ಕಡಿಮೆ ಎತ್ತರದಿಂದ ಪ್ರಾರಂಭಿಸಿ ಅಡ್ಡಕೋಲಿನ ಎತ್ತರವನ್ನು ಕ್ರಮೇಣವಾಗಿ ಎತ್ತರಿಸುತ್ತ ಹೋಗಬೇಕು. ಜಿಗಿಯುವ ಕಣದ ಎದುರಿಗೆ ಯಾರೂ ಕೂಡ್ತಬಾರದು.<br>**ಉದ್ದ ಜಿಗಿತ:** ಉದ್ದ ಜಿಗಿತ ತಂತ್ರದಲ್ಲಿ ಮೂರು ಭಾಗಗಳನ್ನು ಮಾಡುವುದು.<br>1) ಓಡಿ ಬರುವುದು, 2) ಉಡ್ಡಾಣ 3) ಇಳಿಯುವುದು | ಶಿಕ್ಷಕನು ಆದಷ್ಟು ಮಟ್ಟಿಗೆ ಜಿಗಿತದ ತಿಳುವಳಿಕೆ ನೀಡುವುದರ ಮೂಲಕ ಮಕ್ಕಳು ಇದರಲ್ಲಿ ಹೆಚ್ಚಾಗಿ ಭಾಗವಹಿಸುವಂತೆ |
| | **1) ಓಡಿ ಬರುವುದು:** ಜಿಗಿತದ ಹಲಗೆಯವರೆಗೆ ಅತ್ಯಧಿಕ ವೇಗದಿಂದ ಓಡಿ ಬರಬೇಕು. ವೇಗ ಹೆಚ್ಚಾದಷ್ಟು ಜಿಗಿತದ ದೂರ ಹೆಚ್ಚುವುದು. ಹೀಗೆ ಓಡುವಾಗ ದೇಹದ ಸಮತೋಲವನ್ನು ಕಾಯಬೇಕು | - ಮೇಲಿನಂತೆ - |
| | **2) ಉಡ್ಡಾಣ:** ಜಿಗಿಯುವ ಕಾಲು ಅಥವಾ ಶಕ್ತಿಯುತ ಕಾಲನ್ನು ಹಲಗೆಯ ಮೇಲೆ ಇಟ್ಟು ಜೋರಾಗಿ ಹಲಗೆಯನ್ನು ಮುಂಗಾಲಿನಿಂದ ತಳ್ಳಿಮುಂದಕ್ಕೆ ಬಾಗಬೇಕು. ಕೈಕಾಲುಗಳನ್ನು ಗಾಳಿಯಲ್ಲಿ ಬೀಸುತ್ತಾ ಮುಂದಕ್ಕೆ ಕ್ರಮಿಸಲು ಪ್ರಯತ್ನಿಸಬೇಕು.<br>**3) ಇಳಿಯುವುದು :** ಗಾಳಿಯಲ್ಲಿ ತೇಲಿ ಭೂಮಿಗೆ ಬರುವಾಗ ಕಾಲುಗಳನ್ನು ಕೆಳಕ್ಕೆ ಇಳಿಸುವ ಮೊದಲು ಸಾಧ್ಯವಾದಷ್ಟು ಮುಂದೆ ಚಾಚಬೇಕು. ಹಿಮ್ಮಡಿಗಳನ್ನು ಮೊದಲು ನೆಲಕ್ಕೆ ಮುಟ್ಟಿಸಬೇಕು. ಕೈಗಳನ್ನು ಮುಂದೆ ಚಾಚಿ ಸೊಂಟವನ್ನು ಸಾಧ್ಯವಾದಷ್ಟು ಮುಂದೆ | ಶಿಕ್ಷಕರು ಚೆಂಡನ್ನು ಎಸೆಯುವುದರ ಮೂಲಕ ತರಬೇತಿ ನೀಡಿ ಅಂತರದಿಂದ ಮಾಡಿಸುವುದು. |

| ಸಾಮರ್ಥ್ಯ / ಉಪಸಾಮರ್ಥ್ಯ | ದೈಹಿಕ ಶಿಕ್ಷಣ ಬೋಧನೆಯ ಅಭ್ಯಾಸ ಪತ್ರಿಕೆಯ ವಿವರ | ಮಾರ್ಗೋಪಾಯ / ಚಟುವಟಿಕೆ |
|---|---|---|
| | ಬಗ್ಗಿಸಬೇಕು ಭೂಮಿಯನ್ನು ಸ್ಪರ್ಶಮಾಡಿದ ನಂತರ ಮುಂದು ಗಡೆಯಿಂದ ಹೊರಗೆ ಹೋಗಬೇಕು. | |
| | **ಥ್ರೋಬಾಲ್ ಎಸೆತ :** ಅರಂಭದ ಗೆರೆಯ ಹಿಂದೆ ನಿಂತು. ಥ್ರೋಬಾಲ್ ನ್ನು ಶಕ್ತಿಯುತ ಕೈಯಲ್ಲಿ ಹಿಡಿದುಕೊಂಡು ಎಸೆಯುವ ದಿಕ್ಕಿನಲ್ಲಿ ನಿಲ್ಲುವುದು ಚೆಂಡು ಹಿಡಿದು ಕೈಯನ್ನು ಸಾಧ್ಯವಾದಷ್ಟು ಹಿಂದೆ ಚಾಚಿ ವಿರುದ್ಧ ಕಾಲನ್ನು ಮುಂದೆ ಇಟ್ಟು ಕಣ್ಣಿನ ನೇರದಲ್ಲಿ ಸಾಧ್ಯವಿದ್ದಷ್ಟು ಬಲವನ್ನು ಪ್ರಯೋಗಿಸಿ, ಮುಂದಕ್ಕೆ ಚೆಂಡನ್ನು ಎಸೆಯಬೇಕು | |
| | **ಉಪಘಟಕ 2 ಯೋಗಾಸನ (12 ಅವಧಿಗಳು)** | |
| | **ಪ್ರಾರ್ಥನೆ (ಆರಂಭಕ್ಕೆ)** | |
| ಪ್ರಾರ್ಥನೆಯ ಮೂಲಕ ಮನಃ ಶಾಂತಿ ದೊರೆಯುವುದು. | ಓಂ ಸಹನಾವವತು, ಸಹನೌಭುನಕ್ತು. ಸಹವೀರ್ಯಂ ಕರವಾವ ಹೈ! ತೇಜಸ್ವನಾವಧೀತಮಸ್ತು. ಮಾ ವಿದ್ವಿಷಾವ ಹೈ: ಓಂ ಶಾಂತಿ : ಶಾಂತಿ : ಶಾಂತಿ ನಾವಿಬ್ಬರೂ (ಶಿಕ್ಷಕ ಹಾಗೂ ಶೀಕ್ಷಣಾರ್ಥಿ) ಕಾಪಾಡಲ್ಪಡಲಿ ಒಟ್ಟಾಗಿ ಶಕ್ತಿಯುತರಾಗುವ ಅಧ್ಯಯನ ತೇಜಸ್ಸನ್ನು ತಂದುಕೊಡಲಿ ವೈಮನಸ್ಯ ನಮ್ಮಲ್ಲಿ ಬೇಡ ಆದಿಭೌತಿಕ ಆ ದಿದೈವಿಕ ಹಾಗೂ ಅಧ್ಯಾತ್ಮಿಕ ವಿಘ್ನಗಳ ಪರಿಹಾರಕ್ಕೆ 3 ಶಾಂತಿಗಳು | ಶಿಕ್ಷಕರು ಯೋಗಾಸನ ಬಗ್ಗೆ ವಿವರಿಸುವುದು. ನಂತರ ಖಂಡ-ಖಂಡವಾಗಿ ವಿವರಿಸಿ ಹೇಳುವುದು ಹಾಗೂ ಮಾಡಿ ತೋರಿಸುವುದು. ಮೇಲೆ ವಿವರಿಸಿದೆ. |
| | **ಶಿಥಿಲಿಕರಣ** | |
| ಮನಸ್ಸು ಮತ್ತು ಶರೀರವನ್ನು ಹತೋಟಿಯಲ್ಲಿಡುವುದಕ್ಕೆ ನೆರವಾಗುವಿಕೆ | ಸ್ನಾಯುಗಳನ್ನು ಯೋಗಾಸನಕ್ಕಾಗಿ ಸಡಿಲುಗೊಳಿಸುವುದೇ ಶಿಥಿಲಿಕರಣ ಸ್ನಾಯುಗಳ ಪೆಡಸುತನವನ್ನು ಹೋಗಲಾಡಿಸುವುದು **1) ಓಟ ಮತ್ತು ಏಕಸ್ಥಾನ ಕುಣಿತ** : ನಿಧಾನವಾಗಿ ಆಯಾಸರಹಿತವಾಗಿ ಓಡಲು ಪ್ರಾರಂಭಿಸಿ, ಲಯಬದ್ಧವಾಗಿ | |

| ಸಾಮರ್ಥ್ಯ / ಉಪಸಾಮರ್ಥ್ಯ | ದೈಹಿಕ ಶಿಕ್ಷಣ ಬೋಧನೆಯ ಅಭ್ಯಾಸ ಪತ್ರಿಕೆಯ ವಿವರ | ಮಾರ್ಗೋಪಾಯ / ಚಟುವಟಿಕೆ |
|---|---|---|
| | ಉಸಿರಾಡಿಸುತ್ತಾ ನಿಧಾನವಾಗಿ ತಾಡಾಸನದಲ್ಲಿ ವಿಶ್ರಮಿಸುವುದು ನಿಂತ ಸ್ಥಳದಲ್ಲಿಯೇ ನಿಧಾನ, ವೇಗವಾಗಿ ನಿಧಾನವಾಗಿ ಕುಣಿಯುತ್ತಾ ವಿಶ್ರಾಂತಿಗೆ ಬರುವುದು | |
| | 2) **ಮಂಡಿ ಮತ್ತು ಕೀಲುಗಳ ಸಡಿಲಿಸುವಿಕೆ:** ಎರಡೂ ಕೈಗಳನ್ನು ಮುಂದೆ ಚಾಚಿ ಉಸಿರನ್ನು ತೆಗೆದುಕೊಳ್ಳುತ್ತಾ ಕೆಳಗೆ ಕೂಡಬೇಕು ದೇಹ ನೆಟ್ಟಗಿರಬೇಕು. ಪುನಃ ಮೇಲೇಳುತ್ತಾ ಉಸಿರನ್ನು ತೆಗೆದುಕೊಳ್ಳುತ್ತಾ ಎದ್ದು ನಿಲ್ಲಬೇಕು. ನಂತರ ಉಸಿರು ಹೊರಗೆ ಹಾಕಿ | |
| | 3) ಎದ್ದು ನಿಂತು ಕಾಲುಗಳನ್ನು ಅಗಲಿಸಿ ಕೈಗಳನ್ನು ಪಕ್ಕಕ್ಕೆ ಚಾಚಬೇಕು. ಸೊಂಟವನ್ನು ಬಗ್ಗಿಸುತ್ತಾ ಎಡಗೈಯನ್ನು ಬಲಗಾಲಿನ ತುದಿಗೆ ಮುಟ್ಟಿಸುವುದು ಇದರ ಕ್ರಿಯೆಯನ್ನು ಇನ್ನೊಂದು ಕೈಯಿಂದಲೂ ಮಾಡಬೇಕು 4-5 ಸಲ ಪುನರಾವರ್ತಿಸಬೇಕು. | |
| ದೇಹಾದಾರ್ಢ್ಯವನ್ನು ಉತ್ತಮಗೊಳಿಸುವುದು | 4) ಮೊದಲು ಬಲತೋಳನ್ನು ನಂತರ ಎಡತೋಳನ್ನು ನಿಧಾನವಾಗಿ ತಿರುಗಿಸುವುದು | ಕುಳಿತು ಮಾಡುವ ಅಭ್ಯಾಸಗಳನ್ನು ಶಿಕ್ಷಕರು ಮಕ್ಕಳಿಗೆ ತಿಳಿಸುವುದು (ಇದನ್ನು ಸಾಧ್ಯವಿಲ್ಲದಿದ್ದರೆ ಮಾತ್ರ ಮಾಡಿ ತಿಳಿಸುವುದು) |
| ಶುಚಿತ್ವದ ಬಗ್ಗೆ ಉತ್ತಮ ಅರಿವು ಮೂಡಿಸುವುದು ಹಾಗೂ ಯೋಗಾಸನದಿಂದ ಶರೀರವನ್ನು ಶುದ್ಧಿಕರಿಸುವುದು **ಘಟಕ:** ಕಣ್ಣುಗಳನ್ನು ಶುದ್ಧಿ ಗೊಳಿಸುವುದು. | 5) **ಕುಳಿತು ಮಾಡುವ ಅಭ್ಯಾಸಗಳು:** 1) ಸ್ಥಿತಿ:ಬೆನ್ನು ನೇರವಾಗಿ ಇಡೀ ಶರೀರ ಶಿಥಿಲವಾಗಿರುವಂತೆ ಕುಳಿತುಕೊಳ್ಳಿ ಎರಡು ಕಾಲುಗಳು ನೇರವಾಗಿ ಮುಂದಕ್ಕೆ ಚಾಚಿರಲಿ, ಕೈಗಳು ನೇರವಾಗಿರಲಿ ಈ ಸ್ಥಿತಿಯಿಂದ ಎರಡೂ ಕಾಲುಗಳನ್ನು ಹಿಂದಕ್ಕೆ ಮಣಿಸಿ ಹಿಮ್ಮಡಿಗಳ ಮೇಲೆ ವಜ್ರಾಸನದಲ್ಲಿ ಕುಳಿತುಕೊಳ್ಳುವುದು ದೇಹವನ್ನು ನೆಲಕ್ಕೆ ಸಮಾನಂತರವಾಗಿಸಿ ಅಂಗೈಗಳು ಮತ್ತು ಮೊಣಕಾಲುಗಳ ಮೇಲೆ ಚತುಷ್ಪಾದದ ಮೇಲೆ ಕುಳಿತುಕೊಳ್ಳುವುದು ವೇಗವಾಗಿ ಬಾಯಿ ಮೂಲಕ ಉಸಿರು ಬಿಡುತ್ತಾ ಬೆನ್ನನ್ನು ಎತ್ತರಿಸುತ್ತಾ ತಲೆಯನ್ನು ಒಳಕ್ಕೆ ತರುವುದು ನಂತರ ತಲೆಯನ್ನು ಮೇಲಕ್ಕೆತ್ತುತ್ತಾ ಉಸಿರನ್ನು ಎಳೆಯುತ್ತಾ ಬೆನ್ನನ್ನು ನೆಲಕ್ಕೆ ಸಮನಾಗಿ ಇಳಿಸುವುದು. | -ಅದೇ- |

| ಸಾಮರ್ಥ್ಯ / ಉಪಸಾಮರ್ಥ್ಯ | ದೈಹಿಕ ಶಿಕ್ಷಣ ಬೋಧನೆಯ ಅಭ್ಯಾಸ ಪತ್ರಿಕೆಯ ವಿವರ | ಮಾರ್ಗೋಪಾಯ / ಚಟುವಟಿಕೆ |
|---|---|---|
| | ಕುಕ್ಕರಗಾಲಿನಲ್ಲಿ ಕುಳಿತು ಅಂಗೈಗಳ ಆಧಾರದಿಂದ ಕಾಲುಗಳೆರಡನ್ನೂ ಒಮ್ಮೆಲೇ ಎತ್ತಿ ಹಿಂದೆ ಚಾಚುವುದು ಪುನಃ ಕುಕ್ಕರಗಾಲು ಸ್ಥಿತಿಗೆ ಬರುವುದು.<br>**ಕ್ರಿಯೆಗಳು:** ಕ್ರಿಯೆಗಳು ಎಂದರೆ ಶುದ್ದೀಕರಣ ಅಭ್ಯಾಸಗಳು ಸ್ನಾನ ಮಾಡುವುದು ಮುಖ ತೊಳೆಯುವುದು, ಹಲ್ಲು ಉಜ್ಜುವುದು ಆದರೆ ಯೋಗಾಭ್ಯಾಸದಿಂದ ಶರೀರದ ಒಳ ಅಂಗಗಳನ್ನು ಶುದ್ಧಗೊಳಿಸಲು ರೂಢಿಸಲ್ಪಟ್ಟ ವಿಶೇಷ ತಂತ್ರಗಳಿಗೆ ಕ್ರಿಯೆಗಳೆನ್ನುತ್ತಾರೆ. ಷಟ್ ಕ್ರಿಯೆಗಳು ತ್ರಾಟಕ ನೇತಿ, ಕಪಾಲಭಾತಿ, ಧೌತಿ, ನೌತಿ ಮತ್ತು ಬಸ್ತಿ<br>ತ್ರಾಟಕ: ತ್ರಾಟಕ ಕ್ರಿಯೆಯು ಕಣ್ಣುಗಳನ್ನು ಶುದ್ಧಿ ಗೊಳಿಸುವುದು ತ್ರಾಟಕಗಳಲ್ಲಿ ಈ ಕೆಳಗಿನ ವಿಧಾನಗಳನ್ನು ಉಪಯೋಗಿಸಿ ಕಲಿಸುವುದು.<br>1) **ಜತ್ರು ತ್ರಾಟಕ:** ವಜ್ರಾಸನದಲ್ಲಿ ಕುಳಿತು ಒಂದು ತೋಳನ್ನು ಮುಂದೆ ಚಾಚಿ ಆ ಕೈಯ ಬೆರಳು ಹೆಬ್ಬೆರಳು ಮೇಲ್ಮುಖವಾಗಿರಲಿ ಮತ್ತು ಉಳಿದ ಬೆರಳುಗಳು ಮಡಿಚಿರಲಿ, ಕೈಯ ಬೆರಳು ಕಣ್ಣಿನ ಮಟ್ಟದಲ್ಲಿರಲಿ ಭುಜವನ್ನು ತಿರುಗಣಿಯಾಗಿಟ್ಟುಕೊಂಡು ತೋಳನ್ನು ನಿಧಾನವಾಗಿ ಎಡಬದಿಗೆ ಚಲಿಸಬೇಕು ಕತ್ತನ್ನು ಹೊರಳಿಸದೆ ದೃಷ್ಟಿಯನ್ನು ಬೆರಳಿನ ತುದಿಯ ಮೇಲೆ ನೆಟ್ಟಿರಬೇಕು. | -ಅದೇ- |
| ಮೇಲಿನಂತೆ | ನಂತರ ಇದೇ ರೀತಿ ತೋಳನ್ನು ಬಲಬದಿಗೆ ಚಲಿಸುತ್ತಾ 20 ಸೆಕೆಂಡುಗಳ ಪುನರಾವರ್ತನೆ ಮಾಡಬೇಕು ಈ ರೀತಿ ಐದಾರು ಸಲ ಮಾಡಿಸುವುದು ಇದೇ ರೀತಿ ಹೆಬ್ಬೆಟ್ಟನ್ನು ಎದುರಿಗೆ ಚಾಚಿ ಹಿಡಿದು ದೃಷ್ಟಿಯನ್ನು ಕೇಂದ್ರೀಕರಿಸಬಹುದು<br>**ಜ್ಯೋತಿ ತ್ರಾಟಕ :** ಈ ತ್ರಾಟಕದಲ್ಲಿ ದೀಪದ ಕುಡಿಯ ಎಲೆ ದೃಷ್ಟಿಯನ್ನು ಏಕಾಗ್ರಗೊಳಿಸಬೇಕು ಯಾವುದಾದರೂ ಧ್ಯಾನಸನದಲ್ಲಿ ಕುಳಿತುಕೊಳ್ಳುವುದು (ವಜ್ರಾಸನ ಪದ್ಮಾಸನ) | ಮೇಲಿನಂತೆ |

| ಸಾಮರ್ಥ್ಯ / ಉಪಸಾಮರ್ಥ್ಯ | ದೈಹಿಕ ಶಿಕ್ಷಣ ಬೋಧನೆಯ ಅಭ್ಯಾಸ ಪತ್ರಿಕೆಯ ವಿವರ | ಮಾರ್ಗೋಪಾಯ / ಚಟುವಟಿಕೆ |
|---|---|---|
| | ಕಣ್ಣಿನ ನೇರದಲ್ಲಿ ಒಂದು ಮೀ. ದೂರದಲ್ಲಿ ಉರಿಯುತ್ತಿರುವ ದೀಪವನ್ನು ಇರಿಸಿ ರೆಪ್ಪೆಗಳನ್ನು ಮಿಟುಕಿಸದೆ ದೀಪದ ಜ್ವಾಲೆಯನ್ನು ಏಕಾಗ್ರತೆಯಿಂದ ದೃಷ್ಟಿಸುವುದು. ಕಣ್ಣಿನಲ್ಲಿ ನೀರು ಬಂದರೆ ಒರೆಸುವುದು ಬೇಡ. ಹರಿತವಾಗಿ ಮೂರ್‍ನಾಲ್ಕು ನಿಮಿಷಗಳವರೆಗೆ ಮುಂದುವರೆಸಬೇಕು. ಮಧ್ಯದಲ್ಲಿ ಅಂಗೈಗಳಿಂದ ದೃಷ್ಟಿ ಸ್ಥಿರವಾಗುವುದಲ್ಲದೇ ಮನಸ್ಸು ಸಹ ಏಕಾಗ್ರಗೊಳ್ಳುತ್ತದೆ.<br>**ದಂಡ :** ಆಜ್ಞೆ "ದಂಡ ಕೇಲಿಯೆ ಹುಶ್ಯಾರ"<br>**ಸ್ಥಿತಿ:** ಎರಡೂ ಕಾಲುಗಳನ್ನು ಹಿಂದೆ ಚಾಚಿ, ಮುಂಗಾಲುಗಳ ಮೇಲೆ ನಿಂತು, ಅಂಗೈಗಳನ್ನು ನೆಲಕ್ಕೆ ಊರಿ, ದೇಹದ ಸ್ಥಿತಿ ಭೂಮಿಗೆ ಸಮಾನಾಂತರವಿರಲಿ, ಸೊಂಟ ಸ್ವಲ್ಪ ಮೇಲೆ ಎತ್ತಿಸಿರಿ.<br>**ಎಣಿಕೆ 1:** ಸೊಂಟದ ಭಾಗವನ್ನು ಕೆಳಗಿಳಿಸುತ್ತಾ ಎದೆಯನ್ನು ಮುಂದೆ ಚಾಚಿ ಮುಖವನ್ನು ಮೇಲಕ್ಕೆತ್ತಬೇಕು.<br>**ಎಣಿಕೆ 2:** ಮೊದಲಿನ ಸ್ಥಿತಿಗೆ ಬರುವುದು.<br>**ಬಸಕಿ ಬೈರಕ್ಸ್:** ಸಾದಾ ಬೈರಕ್, ಸ್ಥಿತಿಸಾವಾದಾನ.<br>**ಎಣಿಕೆ 1:** ಮುಷ್ಟಿ ಮಾಡಿ ಕೈಗಳನ್ನು ಮುಂದೆ ಚಾಚುತ್ತಾ ಮೊಣಕಾಲುಗಳನ್ನು ಮಡಿಚಿ ಮುಂಗಾಲುಗಳ ಮೇಲೆ ಕುಳಿತುಕೊಳ್ಳುವುದು.<br>**ಎಣಿಕೆ 2:** ನೇರವಾಗಿ ಎದ್ದು ನಿಲ್ಲುತ್ತಾ ಕೈಗಳನ್ನು ಕೆಳಗೆ ಬಿಡುವುದು. ಮೇಲಿನ ದಂಡ, ಮತ್ತು ಬಸಕಿ ಅನೇಕ ಸಲ ಮಾಡುವುದರಿಂದ ಶರೀರದ ಅಂಗ ವಿನ್ಯಾಸಕ್ಕೆ ಶಕ್ತಿ ದೊರೆಯುವುದು. | |
| | **ಸೂರ್ಯ ನಮಸ್ಕಾರ** | |
| ಸೂರ್ಯ ನಮಸ್ಕಾರ ವ್ಯಾಯಾಮದಿಂದ ದೇಹದಾರ್ಢ್ಯವನ್ನು ಬಲಗೊಳಿಸಬಹುದು ಹಾಗೂ ಶಕ್ತಿಯುತ ದೇಹವನ್ನು ಪಡೆಯುವುದು ಹಾಗೂ ಮನಃ ಶಾಂತಿ ದೊರೆಯುವುದು. | ಸೂರ್ಯನಮಸ್ಕಾರವು ಯೋಗಾಸನ ಮತ್ತು ಪ್ರಾಣಾಯಮ ಎರಡನ್ನೂ ಒಳಗೊಂಡಿರುತ್ತದೆ. ಇದು ಶಿಥಿಲೀಕರಣ ಮತ್ತು ಯೋಗಾಸನ ನಡುವೆ ಬರುತ್ತದೆ. ಇದನ್ನು ಆಸನ ಮತ್ತು | ಶಿಕ್ಷಕನು ಸೂರ್ಯನಮಸ್ಕಾರ ಚಟುವಟಿಕೆಗಳ ಬಗ್ಗೆ ವಿವರವಾಗಿ ತಿಳುವಳಿಕೆ ನೀಡಿ ಯಾವ ಸಂದರ್ಭದಲ್ಲಿ ಯಾವ ರೀತಿ ವ್ಯಾಯಾಮ ಮಾಡಬೇಕೆಂಬುದನ್ನು ವಿವರವಾಗಿ ತಿಳಿಸುವುದು. |

| ಸಾಮರ್ಥ್ಯ / ಉಪಸಾಮರ್ಥ್ಯ | ದೈಹಿಕ ಶಿಕ್ಷಣ ಬೋಧನೆಯ ಅಭ್ಯಾಸ ಪತ್ರಿಕೆಯ ವಿವರ | ಮಾರ್ಗೋಪಾಯ / ಚಟುವಟಿಕೆ |
| --- | --- | --- |
| | ಪ್ರಾಣಾಯಾಮಗಳ ಪೂರ್ವಸಿದ್ಧತೆ ಎನ್ನಬಹುದು. ಸೂರ್ಯೋದಯ ಮತ್ತು ಸೂರ್ಯಾಸ್ತ ವೇಳೆಯಲ್ಲಿ ಈ ಆಸನವನ್ನು ಮಾಡುವುದು ರೂಢಿಯಲ್ಲಿದೆ.<br>**ಸ್ಥಿತಿ:** ನಿರಾಯಾಸವಾಗಿ ನೇರವಾಗಿ ನಿಂತುಕೊಳ್ಳುವುದು.<br>**ಎಣಿಕೆ 1:** ಎರಡೂ ಪಾದಗಳನ್ನು ಜೋಡಿಸಿ, ಹಾಗೂ ಎರಡೂ ಕೈಗಳನ್ನು ನೀಳವಾಗಿ ದೇಹದ ಪಕ್ಕದಲ್ಲಿ ಚಾಚಿ, ನೆಟ್ಟಗೆ ಸ್ಥಿತಿಯಲ್ಲಿ ನಿಲ್ಲಿ, ಅಂಗೈಗಳು ಆಯಾ ಭಾಗದ ತೊಡೆಗಳಿಗೆ ತಾಕಿದಂತಿರಬೇಕು. ಕೈಗಳನ್ನು ಊರ್ಧ್ವ ಮುಖವಾಗಿ ಒತ್ತಿ ತಲೆಯನ್ನೂ ಕೈಗಳನ್ನು, ಬೆನ್ನನ್ನೂ ಹಿಂದಕ್ಕೆ ಬಗ್ಗಿಸಿ. ಹೀಗೆ ಮಾಡುವಾಗ ಪೂರ್ಣವಾಗಿ ಉಸಿರನ್ನು ಒಳಗೆ ತೆಗೆದುಕೊಳ್ಳಿ.<br>**ಎಣಿಕೆ 2:** ಶರೀರವನ್ನು ನಿಧಾನವಾಗಿ ಮುಂದಕ್ಕೆ ಬಗಿಸುತ್ತಾ ಅಂಗೈಗಳನ್ನು ಆಯಾ ಪಾದಗಳ ಪಕ್ಕದಲ್ಲಿ ಊರಿ ಹಣೆಯನ್ನು ಮಂಡಿಗೆ ತಾಗಿಸಿರಿ. ಈ ಹಂತದಲ್ಲಿ ಉಸಿರನ್ನು ಹೊರಗೆ ಬಿಡಿ.<br>**ಎಣಿಕೆ 3:** ಈಗ ಬಲಗಾಲನ್ನು ಹಿಂದಕ್ಕೆ ನೀಳವಾಗಿ ಬಾಚಿ. ಎಡತೊಡೆಯನ್ನು ಮುಂದೆ ತಂದು ಮಂಡಿಯನ್ನು ಬಗ್ಗಿಸಿ ಹಿಮ್ಮಡಿಯನ್ನು ನೆಲದ ಮೇಲೆ ಊರಿ ಮೇಲೆ ನೋಡುತ್ತಾ ಉಸಿರನ್ನು ಒಳಗೆ ತೆಗೆದುಕೊಳ್ಳಿ.<br>**ಎಣಿಕೆ 4:** ಈಗ ಎಡಗಾಲನ್ನೂ ಹಿಂದಕ್ಕೆ ತೆಗೆದುಕೊಂಡು ದೇಹವನ್ನು ತಲೆಯಿಂದ ಕಾಲಿನವರೆಗೂ ಕೋಲಿನಂತೆ ನಿಲ್ಲಿಸಿ. ಈ ಸ್ಥಿತಿಯಲ್ಲೇ ಇಡೀ ದೇಹದ ಭಾರ ಅಂಗೈ ಮತ್ತು ಕಾಲಿನ ಬೆರಳುಗಳ ಮೇಲೆ ಇರುವುದು. ದೇಹವು ನೆಲಕ್ಕೆ ಸುಮಾರು $30^{\circ}$ಗಳ ಅಂತರದಲ್ಲಿ ವಾಲಿರುತ್ತದೆ. ಉಸಿರನ್ನು ಪೂರ್ಣವಾಗಿ ಹೊರಗೆ ಬಿಡಿ<br>**ಎಣಿಕೆ 5:** ಉಸಿರನ್ನು ತೆಗೆದುಕೊಳ್ಳುತ್ತಾ ಅಂಗೈಗಳು ಮತ್ತು ಕಾಲು ಬೆರಳುಗಳನ್ನು ಚಲಿಸದೆ ಮಂಡಿ ಊರಿ ಹಿಮ್ಮಡಿಗಳ ಮೇಲೆ ಕುಳಿತು ಅನಂತರ ಉಸಿರನ್ನು ಹೊರಗೆ ಬಿಡಿ. ಹಣೆಯನ್ನು ನೆಲದ ಮೇಲೆ ಇಡಿ. | |

| ಸಾಮರ್ಥ್ಯ/ ಉಪಸಾಮರ್ಥ್ಯ | ದೈಹಿಕ ಶಿಕ್ಷಣ ಬೋಧನೆಯ ಅಭ್ಯಾಸ ಪತ್ರಿಕೆಯ ವಿವರ | ಮಾರ್ಗೋಪಾಯ/ ಚಟುವಟಿಕೆ |
| --- | --- | --- |
| | **ಎಣಿಕೆ 6**: ಅಂಗೈ ಮತ್ತು ಕಾಲಿನ ಬೆರಳುಗಳನ್ನು ಚಲಿಸದೆ ಎದೆಯನ್ನು ಮುಂದಕ್ಕೆ ಚಾಚಿ. ಹಣೆಯನ್ನು ನೆಲಕ್ಕೆ ಊರಿ ಸಾಷ್ಟಾಂಗ ನಮಸ್ಕಾರ ಮಾಡಿ ಈ ಸ್ಥಿತಿಯಲ್ಲಿ ದೇಹದ ಎಂಟು ಭಾಗಗಳಾದ ಹಣೆ. ಎದೆ ಕೈಗಳು, ಮಂಡಿಗಳು ಮತ್ತು ಕಾಲುಗಳು ನೆಲದ ಮೇಲಿರುತ್ತವೆ. ಪೃಷ್ಟಗಳನ್ನು ಸ್ವಲ್ಪ ಮೇಲೆತ್ತಿರಬೇಕು. ಈ ಸ್ಥಿತಿಯಲ್ಲಿ ಬಾಹ್ಯಾಕುಂಭಕವನ್ನು (ಉಸಿರನ್ನು ಹೊರಗೆ ನಿಲ್ಲಿಸುವುದು) ಆಚರಿಸಬೇಕು<br>**ಎಣಿಕೆ 7**: ಹಸ್ತ ಮತ್ತು ಪಾದಗಳ ಸ್ಥಿತಿಯನ್ನು ಬದಲಾಯಿಸದೆ ಉಸಿರನ್ನು ಒಳಕ್ಕೆ ತೆಗೆದುಕೊಳ್ಳುತ್ತಾ ಬೆನ್ನನ್ನು ನಿಮ್ನವಾಗಿ ತಗ್ಗಿಸುತ್ತಾ ತಲೆಯನ್ನೂ ಎದೆಯನ್ನೂ ಮೇಲಕ್ಕೆತ್ತಿರಿ. ಮಂಡಿಗಳು ನೆಲದ ಮೆಲಿರಲಿ<br>**ಎಣಿಕೆ 8:** ಉಸಿರನ್ನು ಹೊರಗೆ ಬಿಡಿ, ಪೃಷ್ಟಗಳನ್ನು ಮೇಲಕ್ಕೆತ್ತುತ್ತಾ ತಲೆಯನ್ನೂ ಎರಡೂ ಕೈಗಳ ಮಧ್ಯೆ ನೂಕಿ. ಹಿಮ್ಮಡಿ ಮತ್ತು ಅಂಗೈಗಳನ್ನು ಪೂರ್ಣವಾಗಿ ನೆಲಕ್ಕೆ ಊರಿದಾಗ ದೇಹವು ಕಮಾನಿನಂತೆ ಬಗ್ಗಿರುತ್ತದೆ.<br>**ಎಣಿಕೆ 9**: (ಐದನೆಯ ಹಂತದ ಪುನರಾವೃತ್ತಿ) ಉಸಿರನ್ನು ಒಳಕ್ಕೆ ತೆಗೆದುಕೊಂಡು ಹೊರಕ್ಕೆ ಬಿಡಿ<br>**ಎಣಿಕೆ: 10:** ಉಸಿರನ್ನು ಒಳಗೆ ತೆಗೆದುಕೊಳ್ಳುತ್ತ ಬಲಪಾದವನ್ನು ಎರಡೂ ಹಸ್ತಗಳ ಮಧ್ಯೆ ತನ್ನಿ ಆಗ ಕೈ ಮತ್ತು ಕಾಲು ಬೆರಳುಗಳು ಒಂದೇ ರೇಖೆಯಲ್ಲಿರಲಿ ಮೂರನೆಯ ಹಂತದಲ್ಲಿರುವಂತೆ ಬೆನ್ನನ್ನು ಹಿಂಭಾಗಕ್ಕೆ ಕಮಾನಿನಂತೆ ಬಗ್ಗಿಸಿರಿ<br>**ಎಣಿಕೆ 11:** ಎರಡನೇಯ ಹಂತದಲ್ಲಿರುವಂತೆ, ಉಸಿರನ್ನು ಹೊರಗೆ ಬಿಡುತ್ತಾ ಎಡಗಾಲನ್ನು ಮುಂದಕ್ಕೆ ತಂದು ಬಲಗಾಲಿನ ಪಕ್ಕದಲ್ಲಿ ಸರಿಸಿ ಹಣೆಯನ್ನು ಮಂಡಿಗೆ ತಾಗಿಸಿರಿ<br>**ಎಣಿಕೆ 12:** ಉಸಿರನ್ನು ಒಳಗೆ ತೆಗೆದುಕೊಳ್ಳುತ್ತಾ ಮೇಲೆ ಎಳೆಯಿರಿ ಆಗ ಕೈಗಳನ್ನು ಮೇಲೆತ್ತಿ ನಿಧಾನವಾಗಿ ಉಸಿರನ್ನು ಹೊರಕ್ಕೆ ಬಿಡುತ್ತಾ ಕೈಗಳನ್ನು ಕೆಳಕ್ಕೆ ತನ್ನಿ ನೇರವಾಗಿ ನಿಂತು ವಿಶ್ರಮಿಸಿ. | |

| ಸಾಮರ್ಥ್ಯ / ಉಪಸಾಮರ್ಥ್ಯ | ದೈಹಿಕ ಶಿಕ್ಷಣ ಬೋಧನೆಯ ಅಭ್ಯಾಸ ಪತ್ರಿಕೆಯ ವಿವರ | ಮಾರ್ಗೋಪಾಯ / ಚಟುವಟಿಕೆ |
|---|---|---|
| | **ಆರೋಗ್ಯ ಶಿಕ್ಷಣ** | |
| ಅ. ಆಹಾರ | ಸಮತೂಕ ಆಹಾರ, ಆಹಾರ ಪ್ರಮಾಣ, ಸ್ಥಳೀಯವಾಗಿ ದೊರಕುವ ಆಹಾರ. | ಶಿಕ್ಷಕರು ಇದರ ಬಗ್ಗೆ ತಿಳುವಳಿಕೆ ನೀಡುವುದು |
| ನೀರು | ನೀರು ಶುದ್ಧಿಕರಣ ಮಾಡುವ ವಿಧಾನವನ್ನು ಅಭ್ಯಸಿಸುವುದು ಮತ್ತು ಸೋಸುವುದು<br>ಅಶುದ್ಧ ನೀರಿನ ಬಗ್ಗೆ ಮಾಹಿತಿ ಅಥವಾ ಆಗುವ ದುಷ್ಪರಿಣಾಮಗಳು. ಗಾಳಿ ವಿಜಿನಗಳ (ವೆಂಟಿಲೇಶನ್) ಪ್ರಾಮುಖ್ಯತೆ | - ಅದೇ - |
| ವೈಯಕ್ತಿಕ ಆರೋಗ್ಯ | ನಾಲ್ಕನೇ ತರಗತಿಯಲ್ಲಿರುವಂತೆ | |
| ಈ ಸಾಮೂಹಿಕ ಆರೋಗ್ಯ | - ಅದೇ -<br>1) ಬೆಂಕಿ, ನದಿ, ಬಾವಿ, ಹೊಂಡಗಳು, ವಿದ್ಯುಚ್ಛಕ್ತಿ ಮುಂತಾದ ಇತರ ವಸ್ತುಗಳಿಂದ ಸುರಕ್ಷಿತವಾಗಿರುವಷ್ಟು ದೂರದಲ್ಲಿರುವುದು | ಶಿಕ್ಷಕರು ತಿಳುವಳಿಕೆ ನೀಡುವುದು ಚಿತ್ರಗಳು, ಚಾರ್ಟುಗಳು ಮತ್ತು ನಿರಂತರ ನಿರ್ದೇಶನಗಳ ಮೂಲಕ ಅವು ದಿನ |
| ಆ) ಸುರಕ್ಷಾ ಕ್ರಮ:<br>ಉತ್ತಮ ಆರೋಗ್ಯ ಬೆಳೆಸಲು ಮತ್ತು ಕಾಪಾಡಲು ಸುರಕ್ಷಾ ಕ್ರಮಗಳ ಮತ್ತು ಪ್ರಥಮ ಚಿಕಿತ್ಸೆಯ ಮಹತ್ವವನ್ನು ಅರಿಯುವುದು. | 2) ಹೆದ್ದಾರಿಗಳಲ್ಲಿ ರಸ್ತೆಗಳಲ್ಲಿ ಮತ್ತು ಓಣಿಗಳಲ್ಲಿ ಸುರಕ್ಷಿತ ಎಡಪಕ್ಕದಲ್ಲಿ ನಡೆಯುವುದು<br>3) ಚಾಕು, ಬ್ಲೇಡು, ಸೂಜಿ, ಒಡೆದ ಗಾಜಿನ ತುಂಡು ಮುಂತಾದ ಚೂಪಾದ ವಸ್ತುಗಳ ಜೊತೆ ಆಟವಾಡದಿರುವುದು. | - ಮೇಲಿನಂತೆ - |
| ತನ್ನ ಸುತ್ತಲಿನ ಕೆಡಕು ಮಾಡುವ ಸನ್ನಿವೇಶಗಳ ಬಗ್ಗೆ ಮತ್ತು ಆ ಬಗ್ಗೆ ತಿಳಿದುಕೊಳ್ಳಬೇಕಾದ ಮುನ್ನೆಚ್ಚರಿಕೆಗಳ ಬಗ್ಗೆ ಮಗುವಿಗೆ ಅರಿವುಂಟು ಮಾಡುವುದು.<br>ಪ್ರಥಮ ಚಿಕಿತ್ಸೆಗೆ ಸಂಬಂಧಿಸಿದ ಪೂರಕ ಚಟುವಟಿಕೆಗಳ ಪರಿಚಯ ಮಾಡಿ ತೊಡಗುವುದು. | 4) ಹಾಳೆ ಬಟ್ಟೆ ಮುಂತಾದವುಗಳಿಗೆ ಬೆಂಕಿ ಹತ್ತಿಕೊಂಡಾಗ ಆರಿಸುವಾಗ ಪ್ರಥಮ ಚಿಕಿತ್ಸೆಯ ಕ್ರಮಗಳನ್ನು ಉಪಯೋಗಿಸುವುದು. ಬೆಂಕಿಯಿಂದ ಸುಟ್ಟುಕೊಂಡಾಗ, ಬೊಬ್ಬೆಗಳಿದ್ದಾಗ, ಕೊಯ್ದುಕೊಂಡಾಗ, ಹುಳುಗಳು ಕಡಿದಾಗ, ಕಣ್ಣಲ್ಲಿ, ಧೂಳು ಬಿದ್ದಾಗ ಪ್ರಥಮ ಚಿಕಿತ್ಸೆ ನೀಡುವುದು. | - ಮೇಲಿನಂತೆ - |
| | ಹೆಚ್ಚಿನ ಮಟ್ಟದ ಪ್ರಥಮ ಚಿಕಿತ್ಸೆ ನೀಡಲು ಹಿರಿಯರಿಗೆ ನೀಡುವುದು | |
| **ಸುರಕ್ಷತಾ ಕ್ರಮ ಹಾಗೂ ಪ್ರಥಮ ಚಿಕಿತ್ಸೆ:** ಅ: ಸಾಂಕ್ರಾಮಿಕ ರೋಗಗಳು ಕಾರಣಗಳು ಮತ್ತು ಮುಂಜಾಗ್ರತೆ ಮತ್ತು ಇತ್ಯಾದಿ4ನೇ ತರಗತಿಯಲ್ಲಿ ಇಳಿಸಲಾಗಿದೆ. | | |

## ಅನುಬಂಧ - II

## 6 ಮತ್ತು 7ನೇ ತರಗತಿ

## 6 ಮತ್ತು 7ನೇ ತರಗತಿ ಅವಧಿಗಳ ಹಂಚಿಕೆ ಪ್ರತಿ ತರಗತಿಗೆ ವಾರಕ್ಕೆ 3 ಅವಧಿಗಳು

| ಕ್ರ.ಸಂ. | ಕಲಿಕಾಂಶ/ಚಟುವಟಿಕೆ | ಪ್ರಾಯೋಗಿಕ | ತಾಂತ್ರಿಕ | ಒಟ್ಟು |
|---|---|---|---|---|
| 1 | ಸೇತುಬಂಧ | 02 | - | 02 |
| 2 | ತಂಡ ಆಟಗಳು | 22 | 05 | 27 |
| 3 | ಮೇಲಾಟಗಳು | 10 | 03 | 13 |
| 4 | ತಾಳಬದ್ಧ ಚಟುವಟಿಕೆಗಳು | 05 | - | 05 |
| 5 | ಯೋಗಾಸನಗಳು | 15 | 01 | 16 |
| 6 | ಪದಕವಾಯಿತು | 05 | - | 05 |
| 7 | ಆರೋಗ್ಯ ಹಾಗು ಪ್ರಥಮ ಚಿಕಿತ್ಸೆ | - | 05 | 05 |
| 8 | ಕಿರು ಆಟಗಳು | 04 | - | 04 |
| 9 | ರಾಷ್ಟ್ರೀಯ ಭಾವೈಕ್ಯತೆ | 03 | 02 | 05 |
| 10 | ದೈಹಿಕ ಸಾಮರ್ಥ್ಯ | 05 | 02 | 07 |
| **ಒಂದು ಶೈಕ್ಷಣಿಕ ವರ್ಷದಲ್ಲಿ ಲಭ್ಯವಿರುವ ಒಟ್ಟು ಅವಧಿಗಳು** | | 72 | 18 | 90 |

6ನೇ ತರಗತಿ

| ಕ್ರಮ ಸಂಖ್ಯೆ | ಸಾಮರ್ಥ್ಯ/ ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯಗಳು | ಅವಧಿಗಳು |
|---|---|---|---|---|
| 1. | 2. | 3. | 4. | 5. |
| 1 | **ಘಟಕ 1**<br>ಸಂಬಂಧಿಸಿದ ಕ್ರೀಡೆಗಳ ಪ್ರಾಥಮಿಕ ಮಾಹಿತಿಯನ್ನು ಪರಿಚಯಿಸಿ ಮನನ ಮಾಡಿಸಿ ಆ ಕ್ರೀಡೆಗಳ ಬಗ್ಗೆ ಆಸಕ್ತಿ ಮೂಡಿಸುವುದು. | **ತಂಡದ ಕ್ರೀಡೆಗಳು**<br>ಕಬಡ್ಡಿ<br>ಖೋಖೋ<br>ವಾಲಿಬಾಲ್<br>ಫುಟ್ ಬಾಲ್<br>ಮೇಲಿನ ನಾಲ್ಕು ಕ್ರೀಡೆಗಳನ್ನು ಮಕ್ಕಳಿಗೆ ಪರಿಚಯಿಸುವುದು. ಕ್ರೀಡೆಗಳ ವಿಶೇಷತೆಯನ್ನು ಮನನ ಮಾಡಿಸುವುದು. ಈ ಕ್ರೀಡೆಗಳ ಅಂಕಣ ಮತ್ತು ಮೈದಾನಗಳ ಅಳತೆ ಮತ್ತು ಆಡುವ ವಿಧಾನಗಳ ಮೂಲಭೂತ ಅಂಶಗಳನ್ನು ವಿವರಿಸಿ ತಿಳಿಸುವುದು. | ಕಪ್ಪು ಹಲಗೆಯ ಮೇಲೆ ಕ್ರೀಡಾ ಅಂಕಣವನ್ನು ರಚಿಸಿ ತಿಳಿಸುವುದು. ಈ ಕ್ರೀಡೆಗಳಿಗೆ ಸಂಬಂಧಿಸಿದ ಛಾರ್ಟ್‌ಗಳನ್ನು ಪ್ರದರ್ಶಿಸುವುದು. | 10 |
| | ರಾಷ್ಟ್ರಪ್ರೇಮವನ್ನು ವಿದ್ಯಾರ್ಥಿಗಳಲ್ಲಿ ಜಾಗೃತಗೊಳಿಸುವುದು<br><br>ರಾಷ್ಟ್ರಗೀತೆ ರಾಷ್ಟ್ರಧ್ವಜಗಳ ಬಗ್ಗೆ ಸರಿಯಾದ ಪರಿಕಲ್ಪನೆ ಮತ್ತು ಗೌರವಿಸುವ ಗುಣವನ್ನು ಬೆಳೆಸುವುದು. | ರಾಷ್ಟ್ರೀಯ ಭಾವೈಕ್ಯತೆ<br>1. ರಾಷ್ಟ್ರಧ್ವಜ<br>ರಾಷ್ಟ್ರಧ್ವಜದ ವರ್ಣನೆ ಬೆಳೆದುಬಂದ ಮಾಹಿತಿ ಉಪಯೋಗಿಸುವ ಸಂದರ್ಭಗಳ ಬಗ್ಗೆ ಸೂಕ್ತ ವಿವರಣೆ ನೀಡುವುದು.<br>2. ರಾಷ್ಟ್ರಗೀತೆ<br>ಬಂಗಾಳ ಭಾಷೆಯಲ್ಲಿರುವ ನಮ್ಮ ರಾಷ್ಟ್ರಗೀತೆಯ ಅರ್ಥ ಭಾವಾರ್ಥ ವೈಶಾಲ್ಯತೆಯನ್ನು ಕನ್ನಡ ಭಾಷೆಯಲ್ಲಿ ಮಕ್ಕಳಿಗೆ ವಿವರಿಸಿ ಮನನ ಮಾಡಿಸುವುದು. | ರಾಷ್ಟ್ರಧ್ವಜದ ಚಿತ್ರಪ್ರದರ್ಶನ ಮತ್ತು ವಿವರಣೆ<br>ರಾಷ್ಟ್ರಗೀತೆಯ ಛಾರ್ಟ್ ಬಳಸಿ ವಿವರಣೆ ನೀಡುವುದು | |
| 2 | **ಘಟಕ 2**<br>ಮೇಲಾಟಗಳ ವಿಷೇಷತೆಯನ್ನು ಪರಿಚಯಿಸುವುದು. ಸಾಧಕರ ಸಾಧನೆಯನ್ನು ಪರಿಚಯಿಸಿ ಮೇಲಾಟಗಳ ಬಗ್ಗೆ ಆಸಕ್ತಿ ವಹಿಸುವಂತೆ ಮಾಡುವುದು | **ಮೇಲಾಟಗಳು**<br>1. ವೇಗದ ಓಟಗಳು<br>2. ಉದ್ದ ಜಿಗಿತ<br>3. ಗುಂಡು ಎಸೆತ<br>ಟ್ರಾಕಿನ ವಿನ್ಯಾಸ ಮತ್ತು ಅಳತೆ ವಿವರಣೆ ಸೆಕ್ಟರ್‌ಗಳ ಅಳತೆ ಮಾಹಿತಿ ನೀಡುವುದು.<br>ಖ್ಯಾತ ಅಥ್ಲೀಟ್‌ಗಳ ಸಾಧನೆಯ ಪರಿಚಯ ರಾಜ್ಯ ಮತ್ತು ಅಂತರರಾಷ್ಟ್ರೀಯದಾಖಲೆಗಳನ್ನು ನೀಡುವುದು | ಛಾರ್ಟ್‌ಗಳ ಬಳಕೆ<br>ಟ್ರಾಕ್ ಮತ್ತು ಫೀಲ್ಡ್ ಸ್ಪರ್ಧೆಗಳ ವ್ಯತ್ಯಾಸವನ್ನು ಚಿತ್ರ ಬಿಡಿಸಿ ಮನನ ಮಾಡಿಸುವುದು. | 4 |

| ಕ್ರಮ ಸಂಖ್ಯೆ | ಸಾಮರ್ಥ್ಯ/ ಉಪಸಾಮರ್ಥ್ಯ | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯಗಳು | ಅವಧಿಗಳು |
|---|---|---|---|---|
| 3 | **ಘಟಕ 3**<br>ಯೋಗಶಿಕ್ಷಣದ ಮಹತ್ವ ಯೋಗ ಮತ್ತು ಆರೋಗ್ಯಕ್ಕೆ ಸಂಬಂಧಿಸಿದ ವಿಷಯಗಳ ಜ್ಞಾನವನ್ನು ಪರಿಚಯಿಸಿ ಯೋಗಾಭ್ಯಾಸವನ್ನು ಮಾಡಲು ಆಸಕ್ತಿ ಬೆಳೆಸುವುದು. | **ಯೋಗಾಸಗಳು**<br>ಪತಂಜಲಿ ಯೋಗದ ಪ್ರಸ್ತಾವನೆ ಯೋಗಾಸನದ ಪೂರ್ವಸಿದ್ಧತೆಯ ಯೋಗದ ಮೌಲ್ಯಗಳು ಯೋಗದಿಂದಾಗುವ ದೈಹಿಕ ಹಾಗೂ ಮಾನಸಿಕ ಲಾಭಗಳು | ಪತಂಜಲಿ ಮಹರ್ಷಿಯ ಚಿತ್ರ ತೋರಿಸಿ ಅವರ ಕಲ್ಪನೆ ಮೂಡಿಸುವುದು.<br>ಯೋಗಶಿಕ್ಷಣದ ಪುಸ್ತಕಗಳನ್ನು ಬಳಸಿಕೊಂಡು ಪೂರ್ವಸಿದ್ಧತೆ ಮೌಲ್ಯ ಲಾಭಗಳ ವಿವರಣೆ ನೀಡುವುದು. | 4 |
| 4 | **ಘಟಕ 4**<br>ಆರೋಗ್ಯದ ಪರಿಕಲ್ಪನೆಗಳನ್ನು ಅಭಿವೃದ್ಧಿಪಡಿಸುವುದು. ವೈಯಕ್ತಿಕ ಸ್ವಚ್ಛತೆಯ ಅಭ್ಯಾಸಗಳನ್ನು ರೂಢಿಸುವುದು.<br>ಪ್ರಥಮ ಚಿಕಿತ್ಸೆಯನ್ನು ಪರಿಚಯಿಸಿ ಅದರ ಜ್ಞಾನಾರ್ಜನೆಯೊಂದಿಗೆ ಆಸಕ್ತಿಯನ್ನು ಬೆಳೆಸುವುದು. | **ಆರೋಗ್ಯ ಶಿಕ್ಷಣ**<br>ಆರೋಗ್ಯದ ಅರ್ಥ ಮತ್ತು ಮಹತ್ವ ತಿಳಿಸುವುದು ವೈಯಕ್ತಿಕ ಸ್ವಚ್ಛತೆ ಬಗ್ಗೆ ತಿಳುವಳಿಕೆ ನೀಡುವುದು. ವ್ಯಾಯಾಮ ವಿಶ್ರಾಂತಿ ಇವುಗಳ ಲಾಭ ಮತ್ತು ಇವುಗಳ ಅವಶ್ಯಕತೆ ತಿಳಿಸುವುದು. ಆದರ್ಶನಿಲುವು /ಭಂಗಿಗಳನ್ನು ರೂಢಿಸುವುದು. ವೈಯಕ್ತಿಕ ಸುರಕ್ಷತೆ ಮತ್ತು ಪ್ರಥಮ ಚಿಕಿತ್ಸೆ ಬಗ್ಗೆ ತಿಳುವಳಿಕೆ ನೀಡುವುದು. ಉತ್ತಮ ಪರಿಸರ ನಿರ್ಮಾಣ ಮತ್ತು ಅದರ ಅವಶ್ಯಕತೆಯ ಮಾಹಿತಿ ನೀಡುವುದು. | ಆರೋಗ್ಯ ಶಿಕ್ಷಣಕ್ಕೆ ಸಂಬಂಧಿಸಿದ ಚಿತ್ರಗಳನ್ನು ಬಳಸುವುದು. ನಿಲುವುಗಳ ಚಿತ್ರಗಳ ಪ್ರದರ್ಶನ ಹಾಗೂ ಪ್ರಥಮ ಚಿಕಿತ್ಸಾ ಸಲಕರಣೆ ಗಳನ್ನು ಬಳಸಿ ಸೂಕ್ತ ಮಾಹಿಅತಿ ನೀಡುವುದು. ಪರಿಸರಕ್ಕೆ ಸಂಬಂಧಿಸಿದ ಚಿತ್ರಗಳನ್ನು ಪ್ರದರ್ಶಿಸುವುದು. | |

**6ನೇ ತರಗತಿ ದೈಹಿಕ ಶಿಕ್ಷಣ ಮತ್ತು ಆರೋಗ್ಯ ಶಿಕ್ಷಣ ಪಠ್ಯವಸ್ತು**

**ಪ್ರಾಯೋಗಿಕ**

| | ಸಾಮರ್ಥ್ಯ (ಉಪಸಾಮರ್ಥ್ಯ) | ವಿಷಯ(ಚಟುವಟಿಕೆ) | ಮಾರ್ಗೋಪಾಯ ((ಚಟುವಟಿಕೆ) | ಅವಧಿ |
|---|---|---|---|---|
| | ಗುಂಪು ಆಟಗಳಿಂದ ಏಕಾಗ್ರತೆ, ದೈಹಿಕ ಸಾಮರ್ಥ ಹಾಗೂ ನಾಯಕತ್ವದ ಗುಣಗಳನ್ನು ಬೆಳೆಸುವುದು. | **ತಂಡ ಕ್ರೀಡೆಗಳು :-**<br>1. ಕಬಡ್ಡಿ<br>2.ಪ್ರಯೋಗಿಕ:-<br>ಕ್ಯಾಂಟ್ (ಉಸಿರು) ಪ್ರವೇಶ,<br>ಧಾಳಿ ಮಾಡುವುದು ಚಲನೆ, ಲೀಡ್ ಲೆಗ್ ರೈಡ್, ಶಫ್ಲಿಂಗ್ ಲೆಗ್ ರೈಡ್,<br>ನ್ಯಾಚುಲ್ ಪುಟ್ ರೈಡ್ . | ಶಿಕ್ಷಕರು ಅಂಕಣ ರಚನೆ ಮಾಡಿ ಕೌಶಲ್ಯಗಳೊಂದಿಗೆ ಅಭ್ಯಾಸ ಮಾಡಿಸುವುದು. | 22 |

| | | | | |
|---|---|---|---|---|
| | | ರನ್ನಿಂಗ್ ಹ್ಯಾಂಟ್ ಟಚ್,<br>ಟರ್ನಿಂಗ್ ಹ್ಯಾಂಡ್,ಟಚ್,<br>ಸಿಂಪಲ್ ಟೋ ಟಚ್, ಸೈಡ್ ಕಿಕ್ ಬ್ಯಾಕ್ ಕಿಕ್,<br>ಡೈವ್ ಓವರ್ ದ ಲೈನ್<br>**ಖೋಖೋ** ಪ್ರಾಯೋಗಿಕ<br>1.ಚೌಕದಲ್ಲಿ ಕುಳಿತುಕೊಳ್ಳುವುದು<br>ಕುಳಿತು ಕೊಳ್ಳುವ ವಿಧಾನ,<br>ಬೈ ಖೋ,<br>ಸಿಂಗಲ್ ಚೈನ್<br>ಕಂಬ ಸುತ್ತುವುದು,<br>3 ಹೆಜ್ಜೆ ವಿಧಾನ,/ 2 ಹೆಜ್ಜೆ ವಿಧಾನ<br>ಕಂಬ ಮತ್ತು ಮೊದಲನೇ ಚೌಕದಲ್ಲಿ ಕುಳಿತವರ ಮಧ್ಯೆ ನುಸುಳುವುದು.<br>3 ಮತ್ತು 6ಚೌಕಗಳ ಮಧ್ಯೆ ಓಡುವುದು ಮತ್ತು ಹಿಡಿಯುವುದು, ಓಡುವಾಗ ಮಾರ್ಗವನ್ನು ಬದಲಾಯಿಸುವುದು<br>ಜಿಗ್‌ಜಾಗ್ ರೀತಿ ಓಡುವುದು<br>ಕಂಬದಿಂದ ಕಂಬಕ್ಕೆ ಓಡುವುದು.<br>**ವಾಲಿಬಾಲ್ ಪ್ರಾಯೋಗಿಕ**<br>1.ಅಂಡರ್ ಹ್ಯಾಂಡ್ ಸರ್ವೀಸ್<br>2.ಅಪ್ಪರ್ ಹ್ಯಾಂಡ್ ಸರ್ವೀಸ್<br>3.ಸೈಡ್ ಆರ್ಮ್ ಸರ್ವೀಸ್<br>4.ಶಾರ್ಟ್ ಆರ್ಮ್ ಸರ್ವೀಸ್<br>5.ಓವರ್ ಹೆಡ್ ಪಾಸ್ | | |
| | | **ಫುಟ್ ಬಾಲ್ ಪ್ರಾಯೋಗಿಕ**<br>ಪ್ರಾಯೋಗಿಕ : ಒಳ ಪಾದದ ಮೂಲಕ ಚೆಂಡನ್ನು ನೂಕುವುದು-<br>Trapping the ball with sole of the foot-with inside of the foot. Dribbling and running with the ball. Kick-low and high volley. Tacking-throw in. | | |

| 1 | 2 | 3 | 4 | 5 |
|---|---|---|---|---|
| 02 | ಘಟಕ-2<br>ದೇಹದ ಶಕ್ತಿ ಹೆಚ್ಚಿಸುವುದು.<br>ದೈಹಿಕ ವೇಗ ಹೆಚ್ಚಿಸುವುದು.<br>ದೇಹ ಹಾಗೂ ಮಾನಸಿಕ ಹೊಂದಾಣಿಕೆಯ ಅಭಿವೃದ್ಧಿ,<br>ದೈಹಿಕ ಕಾರ್ಯ ಕ್ಷಮತೆಯನ್ನು ಅಭಿವೃದ್ಧಿಪಡಿಸುವುದು. | **ಮೇಲಾಟಗಳು:**<br>ಅ. **ವೇಗದ ಓಟಗಳು:-**<br>1) ವಿಶಿಷ್ಟ ಕಂಡಿಷನಿಂಗ್ ವ್ಯಾಯಾಮಗಳು.<br>2) ಓಟದ ಕ್ರಿಯೆಯ ಪುನರಾವರ್ತನೆ.<br>3) ಕ್ರೌಚ್ ಸ್ಟಾರ್ಟ್ /ಬಂಚ್ ಸ್ಟಾರ್ಟ್ / ಮೀಡಿಯಂಸ್ಟಾರ್ಟ್/ ಎಲಾಂಗೇಟಡ್ ಸ್ಟಾರ್ಟ್ ಅಭ್ಯಾಸ ಮಾಡಿಸುವುದು.<br>4) ಫಿನಿಷಿಂಗ್ ಥ್ರೂ ಲಂಜ್, ಶೋಲ್ಡರ್ ಶ್ರಗ್.<br>ಆ. **ಗುಂಡು ಎಸೆತ:**<br>1) ವಿಶಿಷ್ಟ ಕಂಡೀಷನಿಂಗ್ ವ್ಯಾಯಾಮಗಳನ್ನು ಮಾಡಿಸುವುದು.<br>2) ಓಬ್ರೈನ್ ವಿಧಾನ, ಹೋಲ್ಡ್, ಪ್ಲೇಸ್‌ಮೆಂಟ್, ಸ್ಟಾನ್ಸ್, ಗ್ಲೈಡಿಂಗ್, ರಿಲೀಸ್ ಮತ್ತು ರಿಕವರಿ.<br>**ಇ ಉದ್ದಜಿಗಿತ:**<br>1) ವಿಶಿಷ್ಟ ಕಂಡಿಷನಿಂಗ್ ವ್ಯಾಯಾಮಗಳನ್ನು ಮಾಡಿಸುವುದು.<br>2) ಗಾಳಿಯಲ್ಲಿ ಆಕ್ಷನ್-ಹಿಚ್‌ಕಿಕ್.<br>ಲ್ಯಾಂಡಿಗ್-ಸ್ಕೂಪ್, ಸೈಡ್ ಫಾಲ್ ಔಟ್. | ಟ್ರ್ಯಾಕ್ ಮತ್ತು ಸೆಕ್ಕರ್ ಗಳ ಬಳಕೆ.<br>ಕೌಶಲ್ಯಗಳನ್ನು ಮೊದಲು ಪ್ರದರ್ಶಿಸುವುದು.<br>ಕಲಿಕಾ ಹಂತದಲ್ಲಿ ವಿಂಗಡಿಸಿ ಅಭ್ಯಸಿಸುವುದು.<br>ಪೂರ್ಣ ಪ್ರಮಾಣದ ಕ್ರಿಯಾ ಅಭ್ಯಾಸವನ್ನು ಶಿಕ್ಷಕರು ಪರಿಶೀಲಿಸಿ ತಪ್ಪುಗಳಿದ್ದಲ್ಲಿ ಸರಿಪಡಿಸುವುದು. | |
| 3 | ಘಟಕ 3<br>ದೈಹಿಕ ಹೊಂದಾಣಿಕೆ ನರಸ್ನಾಯುಗಳ ಹೊಂದಾಣಿಕೆ/ ಸಹನಶೀಲತೆ ಹಾಗೂ ಸುಂದರ ಚಲನಾಭಿವೃದ್ಧಿಯನ್ನು (ಗ್ರೇಸ್) ಅಭಿವೃದ್ಧಿಪಡಿಸುವುದು. | **ತಾಳಬದ್ಧ ಚಟುವಟಿಕೆಗಳು**<br>1 ಲೆಝೀಮ್ಸ್ (ಹಿಂದೀ)<br>2 ಡಂಬಲ್ಸ್<br>3 ಫ್ಲಾಗ್ ಡ್ರಿಲ್<br>ಇವುಗಳ ಮೂಲಭೂತ ಸ್ಥಿತಿಗಳನ್ನು ಹಾಗೂ 1 ರಿಂದ 4 ವ್ಯಾಯಾಮ ಪಟ್ಟಿಗಳನ್ನು ಮಾಡಿಸುವುದು. | ಪ್ರದರ್ಶನ ವಿವರಣಾ ಪದ್ಧತಿಯಂತೆ ಅಭ್ಯಾಸವನ್ನು ಮಾಡಿಸುವುದು. | |

| 1 | 2 | 3 | 4 | 5 |
|---|---|---|---|---|
| 4 | ಘಟಕ 4<br>ಮನಸ್ಸಿನ ಕೇಂದ್ರೀಕರಣ ಶಕ್ತಿಯ ಅಭಿವೃದ್ಧಿ ದೈಹಿಕ ಕ್ಷಮತೆಯಲ್ಲಿ ಹೆಚ್ಚಳ ಉಸಿರಾಟದ ಸರಿಯಾಧ ಕ್ರಮದ ಅಭಿವೃದ್ಧಿ ಶಾಂತಮನೋಭಾವವನ್ನು ಉಜ್ವಲಗೊಳಿಸುವುದು. | **ಯೋಗಾಸನಗಳು**<br>ಯೋಗಾಸನ (Yoga)<br>ಪ್ರಾಯೋಗಿಕ :-<br>1.ಸೂರ್ಯನಮಸ್ಕಾರ ( 10 ಹಂತಗಳು)<br>ನಿಂತುಮಾಡುವ ಆಸನಗಳು<br>ತಾಡಾಸನ -ಉತ್ಕಟಾಸನ ಅರ್ಧಕಟಿ ಚಕ್ರಾಸನ ಅರ್ಧಚಕ್ರಾಸನ<br>3.ಕುಳಿತು ಮಾಡುವಆಸನಗಳು : ಪದ್ಮಾಸನ, ಭೂನಮನ ಪದ್ಮಾಸನ, ವಜ್ರಾಸನ ,<br>4.ಮಲಗಿ ಮಾಡುವ ಆಸನಗಳು :- ಉತ್ಥಿತ ಮೇರು ದಂಡಾಸನ, ಶೀರ್ಷಬದ್ದ ಮೇರುದಂಡಾಸನ ಭುಜಂಗಾಸನ , ಶವಾಸನ<br>5. ಉಸಿರಾಟದ ಕ್ರಿಯೆಗಳು :- ಕೈಗಳನ್ನು ಪಕ್ಕಕ್ಕೆ ಮತ್ತು ಮುಂದಕ್ಕೆ ಚಾಚುತ್ತ ಉಸಿರಾಡಿಸುವುದು . ಕೈ ಬೆರಳುಗಳನ್ನು ಹೆಣೆದು ಮುಂದಕ್ಕೆ ಚಾಚುವುದು ತಲೆಯನ್ನುಮೇಲಕ್ಕೆ ಚಾಚುತ್ತ ಕೈಗಳನ್ನು ಮೇಲಕ್ಕೆತ್ತುವುದು ಮತ್ತು ಕೆಳಗೆ ತರುವುದು. ಕೈಗಳನ್ನು ಮೇಲೆತ್ತಿ ಮುಂದೆ ಬಾಗುವುದು ಮತ್ತೆ ಮೇಲೆ ಬರುವುದು.<br>6)ಮುದ್ರೆಗಳು: ಪರಿಚಯ, ಅವಶ್ಯಕತೆ, ಚಿನ್ಮುದ್ರೆ, ಚಿನ್ಮಯ ಮುದ್ರೆ, ಆದಿ ಮುದ್ರೆ, ಬ್ರಹ್ಮ ಮುದ್ರೆ. | ಶಿಕ್ಷಕರು ಮೊದಲು ವಿವರಣೆ ಮೂಲಕ ಪ್ರಾಯೋಗಿಕವಾಗಿ ಆಸನಗಳನ್ನು ಮಾಡಿ ತೋರಿಸಿ ಹಂತಹಂತವಾಗಿ ವಿದ್ಯಾರ್ಥಿಗಳಿಂದ ಮಾಡಿಸಿ ಪೂರ್ಣ ಯೋಗಾಸನವನ್ನು ರೂಢಿಗೊಳಿಸುವುದು. | ಅವಧಿಗಳು (15) |
| 5 | ಘಟಕ 5<br>ದೇಹದ ಹೊಂದಾಣಿಕೆಯ ಅಭಿವೃದ್ಧಿ ಚಲನೆಯಲ್ಲಿ ಸರಳತೆ ಮೂಡಿಸುವಿಕೆ ಶಿಸ್ತನ್ನು ಕಲಿಸಿ ಅಭಿವೃದ್ಧಿಪಡಿಸುವುದು. | **ಪದಕವಾಯತು**<br>• ಸಾವ್‌ಧಾನ್<br>• ಆರಾಂಸೇ<br>• ವಿಶ್ರಾಮ್<br>• ಜೈಸೇಥೇ<br>• ಲೈನ್‌ಬನ್<br>• ದೈನೇಬಾಯೇ ಸಚ್<br>• ಸಾಮನೇ ದೇಖ್<br>• ಗೀಂತೀಕರ್<br>• ಕದಂತಾಲ್<br>• ಧಾಮ್ | ಶಿಕ್ಷಕರು ಮೊದಲು ಪ್ರದರ್ಶನ ನೀಡಬೇಕು ಹಂತಹಂತವಾಗಿ ಅಭ್ಯಾಸ ಮಾಡಿಸಬೇಕು. ಸರಿಯಾದ ನಿಲುವುಗಳ ಬಗ್ಗೆ ವಿವರಣೆ ನೀಡುವುದು. | |

ಮನರಂಜನೆಯ ಆಟಗಳು (1 ರಿಂದ 12 ಆಟಗಳು)

ತರಗತಿ - 6ನೇ ತರಗತಿ

ಅವಧಿ: 4 (ಪ್ರಾಯೋಗಿಕ).

| | ಸಾಮರ್ಥ್ಯ | ವಿಷಯ | ಮಾರ್ಗೋಪಾಯಗಳು | ಅವಧಿಗಳು |
|---|---|---|---|---|
| | ದೈಹಿಕ, ಮಾನಸಿಕ ಬೆಳವಣಿಗಾಗಿ:<br>ಬಲ ಪ್ರಯೋಗ<br>ಗುರಿಸಾಧನೆ<br>ಸ್ಪರ್ಧಾಮನೋಭಾವ<br>ಛಲ ಅಂದಾಜು ಮೂಡುವಿಕೆ<br>ಆನಂದ, ಆಸಕ್ತಿ<br>ಸೌಹಾರ್ದ<br>ಸರಿ - ತಪ್ಪು<br>ಹಿಡಿಯುವುದು<br>ನಾಯಕತ್ವ<br>ಸ್ಮರಣೆ<br>ಅಳತೆ ಎಣಿಕೆ<br>ಅಂಗಾಂಗಗಳಿಗೆ ವ್ಯಾಯಾಮ | 1)ಗೂಳಿ ಕಾಳಗ<br>2)ಲಗೋರಿ<br>3)ನಾಯಿ ಮತ್ತು ಮೂಳೆ<br>4)ಸರ್ಕಲ್ ಖೋ-ಖೋ<br>5) ತಾಂಡವ ನೃತ್ಯ<br>6)ನಮಸ್ಕಾರ<br>7)ಗಾಂಧೀಜಿ, ಸ್ವಾಮೀಜಿ, ನೇತಾಜಿ<br>8)ಮೀನಿನ ಬಲೆ<br>9)ಗುರು - ಶಿಷ್ಯರು<br>10)ಸ್ಮರಣ ಶಕ್ತಿ ಆಟ, ವ್ಯಕ್ತಿಯ ಹೆಸರು<br>11)ಇರುವೆಯ ಸಾಲು<br>12)ರೈಲು ಬೋಗಿ | ಆಟಗಳ ಬಗ್ಗೆ ವಿವರಣೆ ಹಾಗೂ ನಿಯಮಗಳನ್ನು ತಿಳಿಸಿ, ಗುಂಪುಗಳಾಗಿ ವಿಂಗಡಿಸಿ, ಮಕ್ಕಳಿಗೆ ಮನೋರಂಜನೆ ದೊರೆಯುವಂತೆ ವೈಯಕ್ತಿಕ ಅವಕಾಶ ಸಿಗುವಂತೆ ಆಡಿಸುವುದು. ಈ ಆಟಗಳನ್ನು ದೈಹಿಕಶಿಕ್ಷಣ ತರಗತಿಗಳ ಕೊನೆಯಲ್ಲಿಯೂ ಸಹಾ ರೂಢಿಸಬಹುದು. | 4 |

<u>7ನೇ ತರಗತಿ ತಾತ್ವಿಕ</u>

<u>ದೈಹಿಕ ಶಿಕ್ಷಣ ಮತ್ತು ಆರೋಗ್ಯ ಶಿಕ್ಷಣ7ನೇ ತರಗತಿ ತಾತ್ವಿಕ</u>

<u>ದೈಹಿಕ ಶಿಕ್ಷಣ ಮತ್ತು ಆರೋಗ್ಯ ಶಿಕ್ಷಣ</u>

| ಕ್ರ.ಸ. | ಸಾಮರ್ಥ್ಯ/ಉಪಸಾಮಥ್ಯಗಳು | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯಗಳು | ಅವಧಿ |
|---|---|---|---|---|
| 1. | ಘಟಕ 01<br>ಸಂಬಂಧಿತ ಆಟಗಳ ಇತಿಹಾಸ ಬೆಳವಣಿಗೆ, ಅಂಕಣ ರಚನೆಗೆ ಜ್ಞಾನವನ್ನು ಬೆಳೆಸುವುದು. | ಕ್ರೀಡೆಗಳು<br>➢ ಕಬ್ಬಡ್ಡಿ<br>➢ ಖೋಖೋ<br>➢ ವಾಲಿಬಾಲ್<br>➢ ಫುಟ್‌ಬಾಲ್<br>➢ ಹಾಕಿ<br>ಈ ಮೇಲಿನ ಕ್ರೀಡೆಗಳ ಇತಿಹಾಸ, ಹುಟ್ಟು, ಬೆಳವಣಿಗೆ ಅಂಕಣಗಳ ಪರಿಚಯ, ಅಳತೆಗಳನ್ನು ಬೋಧಿಸುವುದು. | ತರಗತಿಯಲ್ಲಿ ಹಾಗೂ ಮೈದಾನದಲ್ಲಿ ಅಂಕಣಗಳ ರಚನೆ ಮಾಡಿಸುವುದರ ಮೂಲಕ ವಿದ್ಯಾರ್ಥಿಗಳಿಗೆ ಶಿಕ್ಷಕರು ಮನನ ಮಾಡಿಸುವುದು. | 05 |

| ಕ್ರ.ಸ. | ಸಾಮರ್ಥ್ಯ/ಉಪಸಾಮಥ್ಯಗಳು | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯಗಳು | ಅವಧಿ |
|---|---|---|---|---|
| 2. | ಸಂಬಂಧಿಸಿದ ಮೇಲಾಟಗಳ ಬಗ್ಗೆ ಬೋಧನೆಯ ಮುಖಾಂತರ ಜ್ಞಾನಾಭಿವೃದ್ಧಿ ಮಾಡುವುದು.<br>ಕೌಶಲ್ಯಗಳನ್ನು ಉತ್ತಮವಾಗಿ ನಿರ್ವಹಿಸಲು ಅನುಸರಿಸಬೇಕಾದ ವೈಜ್ಞಾನಿಕ ತರಬೇತಿ ಮೂಲ ಭೇಟಿ ಅಂಶಗಳನ್ನು ವಿವರಿಸುವುದು. | ಮೇಲಾಟಗಳು<br>**<u>ವೇಗದ ಓಟಗಳು:</u>**<br>1. ಕಂಡಿಷನಿಂಗ್ ಮಾಡಿ ದೇಹ ಸಜ್ಜುಗೊಳಿಸುವ ವಿಧಾನ<br>2. ಸ್ಪರ್ಧೆಯ ಮೂಲ ನಿಯಮಗಳನ್ನು ವಿವರಿಸುವುದು.<br>3. ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಅಥ್ಲೇಟ್‌ಗಳ ದಾಖಲೆ ಮತ್ತು ಸಾಧನೆಗಳ ಪರಿಚಯ.<br>**<u>ಉದ್ದ ಜಿಗಿತ:–</u>**<br>1. ಕಂಡಿಷನಿಂಗ್ ವ್ಯಾಯಾಮಗಳ ಬಗ್ಗೆ ತಿಳಿಸುವುದು.<br>2. ವಿವಿಧ ಕೌಶಲ್ಯಗಳು–ಹ್ಯಾಂಗ್–ಸೆಲ್–ವಿತ್‌ಕಿಕ್.<br>3. ಉದ್ದ ಜಿಗಿತದ ಮೂಲ ನಿಯಮಗಳನ್ನು ವಿವರಿಸುವುದು.<br>4. ಉತ್ತಮ ಉದ್ದಜಿಗಿತ ಹಾಡುಗಳ ಸಾಧನೆ ಮತ್ತು ದಾಖಲೆಗಳ ಪರಿಚಯ ತಿಳಿಸುವುದು.<br>**ಗುಂಡು ಎಸೆತ:–**<br>1. ವಿವಿಧ ವಿಧಾನಗಳು – ಓಚಿರಾಯನ್ ವಿಧಾನ ವಿವರ<br>2. ಸ್ಪರ್ಧೆಯ ಮೂಲ ನಿಯಮಗಳ ಪರಿಚಯ<br>3. ಉತ್ತಮ ಶಾಟ್ ಪಾತರ್‌ಗಳ ಸಾಧನೆ ದಾಖಲೆಗಳ ಪರಿಚಯ | ಸಂಬಂಧಿತ ಛಾರ್ಟ್‌ಗಳನ್ನು ತರಗತಿಯಲ್ಲಿ ತೋರಿಸಿ ವಿವರಿಸುವುದು.<br><br>ಸಂಬಂಧಿತ ಕ್ರೀಡಾ ಜ್ಞಾನದ ಪುಸ್ತಕಗಳನ್ನು ಬಳಸಿಕೊಳ್ಳುವುದು. | 05 |
| 3. | ಘಟಕ–3<br>ಯೋಗಾಸನ ತಾತ್ವಿಕ ಪರಿಚಯ ಮಾಡಿಸುವುದು.<br>ಯೋಗಾಸನಗಳಲ್ಲಿ ಭಾಗವಹಿಸಲು ಬೇಕಾಗುವ ಮಾನಸಿದ ಸ್ಥಿತಿಯ ಅಭಿವೃದ್ಧಿಗೊಳಿಸುವುದು.<br>ಯೋಗದ ಮಹತ್ವವನ್ನು ಅರ್ಥೈಸುವುದು ಮತ್ತು ಮನನ ಮಾಡಿಸುವುದು. | ಯೋಗಾಸನ<br>1. ಯೋಗದ ಪರಿಚಯ.<br>2. ವ್ಯಾಖ್ಯೆ.<br>3. ಯೋಗದ ಪಥಗಳು.<br>4. ಅಷ್ಟಾಂಗ ಯೋಗಗಳು.<br>5. ಪ್ರಾಣಾಯಾಮ.<br>ಈ ಮೇಲಿನ ಎಲ್ಲಾ ಯೋಗ ಕೌಶಲ್ಯಗಳ ಬಗ್ಗೆ ಇರುವ ಅರ್ಥ, ಗುರಿಗಳು ಮತ್ತು ಇಂದಿನ ಸಂಕೀರ್ಣ ಸಮಾಜದಲ್ಲಿ ಅದರ ಅವಶ್ಯಕತೆಗಳನ್ನು ವಿವರಿಸುವುದು. ಪೂರ್ವ ಸಿದ್ದತೆಯ ವಿವರಗಳನ್ನು ವಿಶ್ಲೇಷಿಸಿ ವಿವರಿಸುವುದು. | ಯೋಗ ಛಾರ್ಟ್‌ಗಳನ್ನು ಬಳಸಿಕೊಳ್ಳುವುದು.<br>ಯೋಗಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಬಳಸಿಕೊಳ್ಳುವುದು. | 05 |
| 4. | ಘಟಕ–4<br>ಆರೋಗ್ಯದ ಉತ್ತಮ ಅಭ್ಯಾಸಗಳನ್ನು ರೂಢಿಸುವಂತೆ ವಿವರಿಸಿ ಪ್ರೇರೇಪಿಸುವುದು.<br>ಪ್ರಥಮ ಚಿಕಿತ್ಸೆ ಮಾಹಿತಿ ನೀಡುವುದು. ಪ್ರಥಮ ಚಿಕಿತ್ಸೆಯ ಸಂದರ್ಭಗಳಲ್ಲಿ ಸ್ವಯಂ ಪ್ರೇರಿತರಾಗಿ ಭಾಗವಹಿಸುವಂತೆ ಪ್ರವಚನ ನೀಡಿ ಭಾಗವಹಿಸುವ ಆತ್ಮ ಸ್ಥೈರ್ಯದ ಅಭಿವೃದ್ಧಿ ಮಾಡಿಸುವುದು. | ಆರೋಗ್ಯ ಶಿಕ್ಷಣ–ವೈಯಕ್ತಿಕ ಸ್ವಚ್ಛತೆ–ಪ್ರಥಮ ಚಿಕಿತ್ಸೆ<br>1. ಶಾಲಾ ಆರೋಗ್ಯದ ಶಿಕ್ಷಣ ಚಟುವಟಿಕೆಗಳು, ಅರ್ಥ ವಿವರಣೆ, ಶಾಲಾ ಆವರಣ, ಕೊಠಡಿ ಶೌಚಾಲಯ, ಮೈದಾನಗಳಲ್ಲಿ ನಿರ್ವಹಿಸಬೇಕಾದ ಆರೋಗ್ಯದ ಚಟುವಟಿಕೆಗಳ ಬಗ್ಗೆ ಬೋಧಿಸುವುದು.<br>2. ಶಾಲಾ ಉಪಹಾರ ವ್ಯವಸ್ಥೆ, ಸ್ವಚ್ಛತೆ, ಎಚ್ಚರಿಕೆ ಕ್ರಮಗಳ ಮಾಹಿತಿ ನೀಡುವುದು.<br>3. ಸಮತೋಲನ ಮತ್ತು ಸತ್ವಪೂರ್ಣ ಆಹಾರ ಸೇವನೆಯ ಅಗತ್ಯ–ಕ್ರೀಡಾಪಟುಗಳ ಮೇಲೆ ಉಂಟಾಗುವ ಪರಿಣಾಮಗಳ ವಿವರಣೆ.<br>4. ವ್ಯಾಯಾಮಗಳು–ವಿಶ್ರಾಂತಿ–ನಿದ್ದೆ–ಇವುಗಳ ಅವಶ್ಯಕತೆ ಬೋಧನೆ | ಛಾರ್ಟ್‌ಗಳ ಬಳಕೆ<br>ಪ್ರಥಮ ಚಿಕಿತ್ಸೆಯ ಕೆಲವು ವಿಧಾನಗಳನ್ನು ತರಗತಿಯಲ್ಲಿ ಮಾಡಿ ತೋರಿಸುವುದು. | 05 |

ಯೋಗಾ ಸನಗಳು 7ನೇ ತರಗತಿ

| ಸಾಮರ್ಥ್ಯಗಳು | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ (ಚಟುವಟಿಕೆ) | ಅವಧಿಗಳು |
|---|---|---|---|
| 1. ಆಸನಗಳಿಂದ ವಿದ್ಯಾರ್ಥಿಗಳಲ್ಲಿ ಏಕಾಗ್ರತೆ ಮತು ದೈಹಿಕ ಕ್ಷಮತೆ ಹೆಚ್ಚಾಗುತ್ತದೆ ಮತ್ತು ವಿದ್ಯಾರ್ಥಿಗಳು ದೇಹದಂಡನ ಮಾಡುವುದರಿಂದ, ಸಹನೆ, ತಾಳ್ಮೆ ಇತ್ಯಾದಿ ಅಭಿವೃದ್ಧಿಗೊಳ್ಳುತ್ತದೆ. ಸಾಮಾನ್ಯ ಕಾಯಿಲೆಗಳಾದ ಹೊಟ್ಟೆ ನೋವು, ತಲೆ ನೋವು ಇತ್ಯಾದಿ ದೂರವಾ ಗುತ್ತದೆ ಎಂಬ ಅರಿವು ನೀಡುವುದು. | **1. ಪ್ರಾಯೋಗಿಕ**<br>**1. ನಿಂತುಮಾಡುವ ಆಸನಗಳು**<br>(1)ತ್ರಿಕೋನ ಆಸನ<br>(2)ವೀರಭದ್ರ ಆಸನ<br>(3)ಪಾದ ಹಸ್ತಾಸನ<br>(4)ವೃತ್ತ ಆಸನ<br>**2. ಕುಳಿತು ಮಾಡುವ ಆಸನಗಳು**<br>(1) ತೋಲಾ ಆಸನ<br>(2) ಬದ್ಧ ಪದ್ಮಾಸನ<br>(3) ಪರ್ವತಾಸನ<br>(4) ಯೋಗ ಮುದ್ರಾಸನ<br>**3. ಮಲಗಿ ಮಾಡುವ ಆಸನಗಳು**<br>(1) ದ್ವಿಪಾದಾಸನ<br>(2) ಶಲಭಾಸನ<br>(3) ನವಾಸನ | ಶಿಕ್ಷಕರಾದವರು ಮೊದಲು ಪ್ರಾಯೋಗಿಕವಾಗಿ ಮಾಡಿ ತೋರಿಸುವರು (ಪ್ರದರ್ಶನಾ ಪದ್ಧತಿಯಲ್ಲಿ) ನಂತರ ವಿದ್ಯಾರ್ಥಿಗಳಿಗೆ ಮಾಡುವಾಗ ಯಾವುದೇ ಒತ್ತಡ ಹೇರದೆ/ ನಿಧಾನವಾಗಿ ಮಾಡಿಸುತ್ತಾ, ಅವರ ಶರೀರದಲ್ಲಿರುವ ಭಂಗಿ (ನಿಲುವು)ಗಳ ತಪ್ಪು ತಿದ್ದುತ್ತಾ ಹೋಗುವರು. | 16 |
| ಉಸಿರಾಟದ ವ್ಯಾಯಾಮಗಳಿಂದ ಪರಾಗ ಉಸಿರಾಟ ಮತ್ತು ದೀರ್ಘ ಉಸಿರಾಟದಿಂದ ಆರೋಗ್ಯಕರ ದೇಹ ಹೊಂದಲು ಸಾಧ್ಯವಾಗುತ್ತದೆ. ಈ ವ್ಯಾಯಾಮಗಳಿಂದ ಮೂಗಿನಲ್ಲಿರುವ ಸಾಮಾನ್ಯ ತೊಂದರೆಗಳು ಗಂಟಲಿನಲ್ಲಿರುವ ತೊಂದರೆಗಳು, ದೂರವಾಗುತ್ತವೆಂಬುದರ ಜ್ಞಾನ ಕೊಡಬೇಕು. (ವೇಗವಾದ ಉಸಿರಾಟದಿಂದ ಆಯಸ್ಸು ಕಡಿಮೆಯಾಗುವುದರ ಬಗ್ಗೆ ವಿವರಣೆ ನೀಡಬೇಕಾಗುತ್ತದೆ) | **4. ಉಸಿರಾಟ ಕ್ರಿಯೆಗಳು**<br>ಕೈಗಳನ್ನು ಭುಜದ ಮೇಲಿಟ್ಟು ಮೇಲೆ ಎತ್ತುವುದು, ಪಕ್ಕಕ್ಕೆ ನಿಧಾನವಾಗಿ ಕೈ ಎತ್ತಿ ಬಾಗುವುದು. ಒಂದು ಕಾಲನ್ನು ಮುಂದೆ ಹಾಕುವುದು ಮತ್ತು ಸ್ಥಿತಿಗೆ ಬರುವುದು. ಮತ್ತೊಂದು ಕಾಲಿನಿಂದ ಹಿಂದಕ್ಕೆ ಮುಂದಕ್ಕೆ ಬಾಗುವುದು.<br>**5. ಮುದ್ರೆಗಳು:**<br>ನಾಸಿಕ ಮುದ್ರೆ, ಷಣ್ಮುಖ ಮುದ್ರೆ, ಅಧಮ ಶ್ವಾಸ, ಹೊಟ್ಟೆಯ ಉಸಿರಾಟ, ಉದರ ಶ್ವಾಸ, ಮಧ್ಯಮ | ಉಸಿರಾಟದ ಪ್ರಕ್ರಿಯೆಯಲ್ಲಿ ಏರಿಳಿತ, ಕ್ರಮಬದ್ಧತೆಯನ್ನು ಅನುಸರಿಸುವಂತೆ ಸೂಚನೆ ಕೊಡುತ್ತಾ ಹೋಗುವರು. ಇಲ್ಲ ಶಿಕ್ಷಕರು ವೈಯಕ್ತಿಕ ಗಮನ ನೀಡಿ, ಅವರ ತಪ್ಪು ತಿದ್ದುತ್ತಾ ಹೋಗುವರು. ಮತ್ತು ವಿದ್ಯಾರ್ಥಿಗಳಿಗೆ ಮನಸ್ಸು ಕೇಂದ್ರೀಕರಿಸುವಂತೆ ಸೂಚಿಸುತ್ತಾ ಹೋಗುವರು. ಉಸಿರಾಟದ ಕ್ರಮಬದ್ಧತೆಯು ವಿದ್ಯಾರ್ಥಿಗಳ ಓದಿಗೆ ಮನವರಿಕೆ ಮಾಡುತ್ತಾ ಹೋಗುವುದು. | |

**ತಾಳಬದ್ಧ ಚಟುವಟಿಕೆಗಳು (7ನೇ ತರಗತಿ)**

| ಸಾಮರ್ಥ್ಯಗಳು | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ (ಚಟುವಟಿಕೆ) | ಅವಧಿಗಳು |
|---|---|---|---|
| 1. ವಿದ್ಯಾರ್ಥಿಗಳಲ್ಲಿ ಹೊಂದಾಣಿಕೆ, ತಾಳಬದ್ಧವಾಗಿ ಚಟುವಟಿಕೆಯಲ್ಲಿ ಭಾಗವಹಿಸುತ್ತಾರೆ. ಮತ್ತು ಅದರಲ್ಲಿ ನರಸ್ನಾಯು ಹೊಂದಾಣಿಕೆ ವೃದ್ಧಿಯಾಗುತ್ತದೆ. | **1. ಪ್ರಾಯೋಗಿಕ**<br>ಹಿಂದಿನವುಗಳ ಪುನರಾವರ್ತನೆ ಲೇಝಿಮ್‌ನಲ್ಲಿ<br>(1) ಆಗೆ ಫಲಾಂಗ್<br>(2) ಪೀಛೆ ಫಲಾಂಗ್<br>(3) ದೊ-ರುಖ್ | ಶಿಕ್ಷಕರು ಲೇಝಿಮ್‌ನ ಕವಾಯತು ಮಾಡಿ ತೋರಿಸುತ್ತಾರೆ. ನಂತರ ಎಣಿಕೆಯಂತೆ ಮಾಡುತ್ತಾ, ವಿವರಣೆ ನೀಡುತ್ತಾ ಮಾಡಿ ತೋರಿಸುವರು. ವಿದ್ಯಾರ್ಥಿಗಳಿಂದ ಮಾಡಿಸುತ್ತಾ, ತಪ್ಪು ತಿದ್ದುತ್ತಾ ಹೋಗುವರು. | 06 |
| 2. ವಿದ್ಯಾರ್ಥಿಗಳಿಗೆ ಈ ಚಟುವಟಿಕೆ ಗಳಿಂದ ತಾಳಬದ್ಧವಾಗಿ ಹೆಜ್ಜೆ ಹಾಕುವುದರ ಜೊತೆ ಗೆ ದೈಹಿಕ ಸಾಮರ್ಥ್ಯ (Stamina) ವೃದ್ಧಿಯಾ ಗುತ್ತದೆ. ಈ ಚಟುವಟಿಕೆಗಳಿಂದ ಪರೋಕ್ಷವಾಗಿ ವಿದ್ಯಾರ್ಥಿಯ ಉಸಿರಾಟದ ಕ್ರಮಬದ್ಧತೆ ಉತ್ತಮಗೊಳ್ಳುತ್ತದೆ. | **2. ಏರೋಬಿಕ್ಸ್ - ಪ್ರಾಯೋಗಿಕ**<br>1) Low impact on spot march<br>2) March for word back word<br>3) Step at sideways<br>4) Double step touch<br>5) L shape movement<br>6) V Shape movement<br>7) Step touch for word<br>8) Side step movement | ಶಿಕ್ಷಕರು ವಿದ್ಯಾರ್ಥಿಗಳಿಗೆ ಇಲ್ಲಿ ಸೂಚಿಸಿದ ಚಟುವಟಿಕೆಗಳನ್ನು ಪ್ರದರ್ಶನಾ ಪದ್ಧತಿಯನ್ವಯ ಮಾಡಿ ತೋರಿಸುವರು. ನಂತರ ವಿದ್ಯಾರ್ಥಿಗಳಿಗೆ ಮಾಡಲು ಹೇಳಿ ತಪ್ಪು ತಿದ್ದುತ್ತಾ ಸಾಗುವರು. | |

**ರಾಷ್ಟ್ರೀಯ ಭಾವೈಕ್ಯತೆ**

ತರಗತಿ - 7ನೇ ತರಗತಿ
ಅವಧಿ - 05
ಪ್ರಾಯೋಗಿಕ - 03
ತಾತ್ವಿಕ -02

| ಸಾಮರ್ಥ್ಯಗಳು | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ (ಚಟುವಟಿಕೆ) | ಅವಧಿಗಳು |
|---|---|---|---|
| 1. ನಾಡಹಬ್ಬದ ಮಹತ್ವ | ಕರ್ನಾಟಕ ರಾಜ್ಯೋತ್ಸವ (ನವಂಬರ್-1) | ಶಾಲೆಯಲ್ಲಿ ಆಚರಿಸುವುದರ ಮೂಲಕ ನಾಡಿನ ಬಗ್ಗೆ ಗೌರವ ಮೂಡಿಸುವುದು | |
| 2. ರಾಷ್ಟ್ರೀಯ ಹಬ್ಬಗಳ ಮಹತ್ವ | ರಾಷ್ಟ್ರೀಯ ಹಬ್ಬಗಳು<br>(ಆಗಸ್ಟ್ 15, ಜನವರಿ 26, ಅಕ್ಟೋಬರ್ 2) | ರಾಷ್ಟ್ರೀಯ ಹಬ್ಬಗಳ ಮಹತ್ವವನ್ನು ತಿಳಿಸಿ, ರಾಷ್ಟ್ರೀಯ ಭಾವೈಕ್ಯತೆಯನ್ನು ಮೂಡಿಸುವುದು. | |
| 3. ರಾಷ್ಟ್ರೀಯ ಲಾಂಛನಗಳ ಮಹತ್ವ | ಸ್ಥಂಭದ ಮೇಲೆ ಬೆನ್ನಿಗೆ ಬೆನ್ನು ಕೊಟ್ಟು ನಿಂತಿರುವ ನಾಲ್ಕು ಸಿಂಹಗಳು | ಲಾಂಛನದ ಮಾದರಿಯನ್ನು ತಯಾರಿಸುವುದರ ಮೂಲಕ ರಾಷ್ಟ್ರೀಯ ಭಾವೈಕ್ಯತೆಯನ್ನು ಮೂಡಿಸುವುದು. | |
| 4. ರಾಷ್ಟ್ರೀಯ ಭಾವೈಕ್ಯತೆ ಮೂಡಿಸುವ ಗೀತೆಗಳ ಮಹತ್ವ | ರಾಷ್ಟ್ರೀಯ ಭಾವೈಕ್ಯತೆಯ ಗೀತೆಗಳ ರಚನೆಕಾರರು ಹಾಗೂ ಬಾವಾರ್ಥಗಳ ಪರಿಚಯ | ರಾಷ್ಟ್ರೀಯ ಭಾವೈಕ್ಯತೆಯ ಗೀತೆಗಳನ್ನು ಕಲಿಸುವುದು, ರಾಗಬದ್ಧವಾಗಿ ಹಾಡಿಸುವುದು ಹಾಗೂ ಗೀತೆಗಳ ಸ್ಪರ್ಧೆಗಳನ್ನು ಏರ್ಪಡಿಸುವುದು. | |

| ಸಾಮರ್ಥ್ಯಗಳು | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ (ಚಟುವಟಿಕೆ) |
|---|---|---|
| ಈ ಕ್ರೀಡೆಗಳಿಂದ ದೇಹದ ಬೆಳವಣಿಗೆ, ಬೌದ್ಧಿಕ ಬೆಳವಣಿಗೆ, ಸಾಮಾಜಿಕ ಬೆಳವಣಿಗೆ ಹಾಗೂ ಅಧ್ಯಾತ್ಮಿಕ ಬೆಳವಣಿಗೆ ಬಗ್ಗೆ ಆಸಕ್ತಿ ಬೆಳೆಸುವುದು | **ಕ್ರೀಡೆಗಳು: ತಾತ್ವಿಕ ಅವಧಿಗಳು - 05**<br>ಕಬಡ್ಡಿ, ಖೊ-ಖೊ, ವಾಲಿಬಾಲ್ ಮತ್ತು ಫುಟ್‌ಬಾಲ್ ಆಟದ ಇತಿಹಾಸ, ಹುಟ್ಟು ಬೆಳವಣಿಗೆ ಅಂಕಣದ ಪರಿಚಯ, ಆಟವಾಡುವ ವಿಧಾನ, ಆಳತೆ, ಪ್ರಶ್ನೆಪತ್ರಿಕೆ<br>**ಪ್ರಾಯೋಗಿಕ ಅವಧಿಗಳು - 22**<br>**ಕಬಡ್ಡಿ**: Offensive Skills, ರಿವರ್ಸ್ ಪ್ಯೂಟ್‌ರೈಡ್, ಸ್ಟೇರಿಗ್ ಹ್ಯಾಂಡ್ ಟಚ್ ಜಾಡಿಸಿ ತುದಿಗಾಲನ್ನು ಮುಟ್ಟುವುದು, ವಕ್ರವಾಗಿ ತುದಿಗಾಲನ್ನು ಮುಟ್ಟುವುದು. ಬಿನೇಫನ್‌ರೈಡ್, ಫ್ಲೈಕಿಕ್<br>**ಖೊ-ಖೊ**: Chasing Skills-From third Kho. Rushing towards pasting japing (chasing sidi) Lag chasing, sudden, attack, A voicing the sudden off oak<br>(5)Game situation with skills<br>**ವಾಲಿಬಾಲ್**: Overhead Back pass Short pass, Overhead wide pass, Floating service, Spin service, Straight one hand receive, Rotation and Substation.<br>**ಫುಟ್‌ಬಾಲ್**: Pass with out side of the foot. Trapping the ball with thigh, Goal keeping, the kick-full voliey outside of the foot.<br>(1) ಹಾಕಿ: ಕೌಶಲ್ಯಗಳು ಹಾಗೂ ಪರಿಚಯ<br>ಸ್ಟಿಕ್ ಹಿಡಿಯುವುದು Grip ಮತ್ತು ನಿಲ್ಲುವುದು.<br>ಪಾಸ್-ಲಾಂಗ್ ಪಾಸ್, ಶಾರ್ಟ್ ಪಾಸ್<br>ಫ್ಲಿಕ್ ಮತ್ತು ಟ್ರ್ಯಾಪಿಂಗ್, ಹಿಟ್ ಸ್ಕೂಪ್<br>ಚೆಂಡು ತಡೆಯುವುದು, ಫ್ಲಿಕ್‌ಗಳು, ಟ್ಯಾಕಲ್, ಟ್ರ್ಯಾಪಿಂಗ್ | ಈ ಕ್ರೀಡೆಗಳ ಕೌಶಲ್ಯಗಳನ್ನು ಅಂಕಣ ಮೂಲಕ ಪ್ರಾಯೋಗಿಕವಾಗಿ ಶಿಕ್ಷಕರು ವಿದ್ಯಾರ್ಥಿಗಳೊಂದಿಗೆ ಅಂಕಣದಲ್ಲಿ ಅಭ್ಯಾಸ ಮಾಡುವುದು. |

| ಸಾಮರ್ಥ್ಯಗಳು | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ (ಚಟುವಟಿಕೆ) |
|---|---|---|
| ದೇಹಧಾರ್ಡ್ಯತೆ ಮತ್ತು ದಕ್ಷತೆಗಳನ್ನು ಹಾಗೂ ಧೈರ್ಯ ನಿಸ್ವಾರ್ಥತೆ, ಕ್ರೀಡೆಗಳ ಕೌಶಲ್ಯಗಳನ್ನು ಅಭಿವೃದ್ಧಿಗೊಳಿಸುವುದು<br><br>ಮೂಲಭೂತ ಸ್ಥಿತಿ ಹಾಗೂ ಚಲನೆಗಳಾ ದಂತಹ ಕೂಡುವ, ನಡೆಯುವ, ಓಡುವ, ಜಿಗಿಯುವ ಇತ್ಯಾದಿಗಳ ಸರಿಯಾದ ಭಂಗಿ ಹಾಗೂ ಚಲನೆಗಳ ಪ್ರಾಮುಖ್ಯತೆಯನ್ನು ಅರಿವು ಮೂಡಿಸುವುದು. | **(2) ಮೇಲಾಟಗಳು:**<br>**ತಾತ್ವಿಕ ಅವಧಿ -03 ಪ್ರಾಯೋಗಿಕ ಅವಧಿ -10**<br>(ಅ) ವೇಗದ ಓಟಗಳು:<br>**Sprids:**<br>Conditioning aspects-Basic rules of the competition starts. Staggers folis records. National and International sport man.<br>**Long Jump**: Conditioning styles, hang soil, witch kick Basic rules of the<br>**Shot Put:** Conditioning exercises<br>Pairy O Brain Style: hold and plocerment Stance T and Cromel gliaing rejease and recovery Lead -up activities. | ವೇಗ, ಎತ್ತರ ಹಾಗೂ ಜಿಗಿತಗಳ ಮೂಲಕ ಶರೀರವನ್ನು ಅಣಿಗೊಳಿಸಲು ಹಲವು ಪ್ರಕಾರದ ವ್ಯಾಯಾಮದ ಮೂಲಕ ದೈಹಿಕ ಶಿಕ್ಷಣ ಶಿಕ್ಷಕರು ಹಾಗೂ ವಿದ್ಯಾರ್ಥಿಗಳ ಮುಖಾಂತರ ತಿಳಿಸುವುದು. |

**ಪದಕವಾಯಿತು (7ನೇ ತರಗತಿ)**

| ಸಾಮರ್ಥ್ಯಗಳು | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ (ಚಟುವಟಿಕೆ) | ಅವಧಿಗಳು |
|---|---|---|---|
| ವಿದ್ಯಾರ್ಥಿಗಳಲ್ಲಿರುವ ಸಾಮಾನ್ಯವಾಗಿ ಕಂಡುಬರುವ ನಡಿಗೆಯಲ್ಲಿನ ದೋಷಗಳನ್ನು ತಿದ್ದಲು ಇದು ಸಹಾಯಕಾರಿಯಾಗಿದ್ದು, ಅವರಲ್ಲಿ ಶಿಸ್ತು ಕಂಡುಬರುತ್ತದೆ. ನಡಿಗೆಯ ಶೈಲಿ, ಕುಳಿತುಕೊಳ್ಳುವ ಶೈಲಿ ಇತ್ಯಾದಿಗಳನ್ನು ಸರಿಮಾಡಿಕೊಳ್ಳಲು ಈ ಚಟುವಟಿಕೆಗಳು ಪೂರಕವಾಗಿರುತ್ತವೆ. ಮತ್ತು ಉತ್ತಮ ನಾಗರೀಕರನ್ನಾಗಿ ರೂಪಿಸಲು ಈ ಕ್ರಮವು ಸೂಕ್ತವಾಗಿರುತ್ತದೆ.<br>ಉದಾ:ಗೂನುಬೆನ್ನು, ತೊಡರುಕಾಲು ಸಮಸ್ಯೆ | **1. ಪದಕವಾಯಿತು - ಪ್ರಾಯೋಗಿಕ**<br>1) ಬೈಠ್‌ಜಾವ್/ಖಡೆ ಹೋಜಾವ್<br>2) ಪೀಛೆ ಮೂಡ್<br>3) ದೈನೆ/ಬಾಯೆ ಮೂಡ್<br>4) ಸಾಮ್ನೆ ಸೆಲ್ಯೂಟ್<br>5) ದೋ ಲೈನ್<br>6) ತೀನ್ ಲೈನ್ ಬನ್<br>7) ಧೀರೆ ಚಲ್<br>8) ಧೀರೆ ಚಲ್ ಮೇ ಥಾಮ್<br>9) ಧೀರೇ ಹಲ್ ಮೇ ಕದಂ ತಾಲ್<br>10) ತೀನ್ ಲೈನ್ ಮೇ ಚಲ್ | ಶಿಕ್ಷಕರು ಸದರಿ ಚಟುವಟಿಕೆಗಳನ್ನು ಪ್ರದರ್ಶನ ಪದ್ಧತಿಯಿಂದ ಮಾಡಿ ತೋರಿಸುವರು ಮತ್ತು ಮನುಷ್ಯನಿಗೆ ಉತ್ತಮ ನಡಿಗೆಯ ಮಹತ್ವ ತಿಳಿಸುವುದು. ವಿದ್ಯಾರ್ಥಿಗಳಲ್ಲಿ ಕಂಡುಬರುವ ಸಾಮಾನ್ಯ ದೋಷಗಳನ್ನು ಪಟ್ಟಿ ವಿವರಿಸುತ್ತಾ ಪದಕವಾಯಿತು ಮೂಲಕ ಆ ದೋಷಗಳ ನಿವಾರಣೆಗೆ ಶಿಕ್ಷಕರು ಪದಕವಾಯಿತು ಮೂಲಕ ನಿವಾರಿಸಲು ಯತ್ನಿಸುತ್ತಾರೆ. ವಿದ್ಯಾರ್ಥಿಗಳಿಗೆ ಪದಕವಾಯಿತು ಮಾಡಿಸಿ ತಪ್ಪು ತಿದ್ದಿ, ನೇರ ಕೈ ಕಾಲು ಹಾಕುವ ವಿಧಾನ ಇತ್ಯಾದಿ ಕಲಿಸುತ್ತಾ ಹೋಗುವರು. | 05 |

## ಮನರಂಜನೆಯ ಆಟಗಳು (ಕಿರು ಆಟಗಳು)

ತರಗತಿ - 7ನೇ ತರಗತಿ

ಅವಧಿ - 4 (ಪ್ರಾಯೋಗಿಕ)

| ಸಾಮರ್ಥ್ಯಗಳು | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ (ಚಟುವಟಿಕೆ) | ಅವಧಿಗಳು |
|---|---|---|---|
| 1) ಗುರಿ ಸಾಧನೆ<br>2) ಚಿಕ್ಕದು, ದೊಡ್ಡದರ ಪರಿಕಲ್ಪನೆ<br>3) ಸರಿ, ತಪ್ಪು<br>4) ಸೌಹಾರ್ದ<br>5) ಕಷ್ಟ ಸಹಿಷ್ಣುತೆ<br>6) ಆನಂದ-ಆಸಕ್ತಿ<br>7) ಅಳತೆ ಎಣಿಕೆ<br>8) ಛಲ-ಅಂದಾಜು ಮಾಡುವಿಕೆ<br>9) ನಿಯಮ ಪಾಲನೆ<br>10)ಹತ್ತಿರ ದೂರದ ಪರಿಕಲ್ಪನೆ<br>11)ನಾಯಕತ್ವ<br>12)ಹಿಡಿಯುವುದು | 1) ಜೈಲು ಭರೋ<br>2) ರಾಮ ರಾವಣ<br>3) ಅಮೃತ ವಿಷ<br>4) ಪರಿಚಯ ತಿಳಿಸುವುದು<br>5) ಹಾ, ಹಾ, ಭಂ, ಭಂ<br>6) ತರಕಾರಿ ಹೂವು ಹಣ್ಣು<br>7) ವರ್ಣಮಾಲೆಯ ಆಟ<br>8) ರಾಷ್ಟ್ರಪುರುಷ ಆಟಗಳು<br>9) ಮನೆಯಾರದೆಂದು ಗುರುತಿಸುವುದು<br>10)ಭೂಮಿ, ಪಾತಾಳ<br>11) ಕಳ್ಳ ಬಂದ ಒಗ್ಗಟ್ಟಾಗು<br>12) ಕ್ಲ್ಯಾಪ್ ಖೋ | ಆಟಗಳ ಬಗ್ಗೆ ವಿವರಣೆ ನೀಡಿ, ನಿಯಮಗಳನ್ನು ತಿಳಿಸಿ, ವೈಯಕ್ತಿಕ ಅವಕಾಶವನ್ನು ನೀಡಿ, ಮಕ್ಕಳಿಗೆ ಮನೋರಂಜನೆ ಸಿಗುವಂತೆ ಆಡಿಸುವುದರಿಂದ, ಮಕ್ಕಳ ಸಂತೋಷ ಇಮ್ಮಡಿಗೊಂಡು, ಮತ್ತೆ ಮತ್ತೆ ಸ್ವಇಚ್ಛೆಯಿಂದ ಆಡುವಂತೆ ಮಾಡುವುದು. | 4 |

## ಆರೋಗ್ಯ ಶಿಕ್ಷಣ, ಸ್ವಚ್ಛತೆ ಮತ್ತು ಪ್ರಥಮ ಚಿಕಿತ್ಸೆ (7ನೇ ತರಗತಿ)

| ಸಾಮರ್ಥ್ಯಗಳು | ವಿಷಯ ಮತ್ತು ಚಟುವಟಿಕೆ | ಮಾರ್ಗೋಪಾಯ (ಚಟುವಟಿಕೆ) | ಅವಧಿಗಳು |
|---|---|---|---|
| ವಿದ್ಯಾರ್ಥಿಗಳಲ್ಲಿ ಆರೋಗ್ಯದ ಅರಿವು ಮೂಡಿಸುವುದು ಮತ್ತು ಅವರಲ್ಲಯ ವೈಯಕ್ತಿಕ ಸ್ವಚ್ಛತೆ, ಪರಿಸರ ಸ್ವಚ್ಛತೆ, ತರಗತಿ ಸ್ವಚ್ಛತೆ ಇತ್ಯಾದಿಗಳ ಅರಿವು ಮೂಡುತ್ತದೆ. ಶಾಲಾ ಮೈದಾನ ಸ್ವಚ್ಛತೆಯಿಂದಾಗಿ ಆರೋಗ್ಯದ ಅರಿವು ದೊರೆಯುತ್ತದೆ. ಆರೋಗ್ಯದ ದೃಷ್ಠಿಯಿಂದ ಉತ್ತಮ ಆಹಾರದ ಸೇವೆನೆ ಬಗ್ಗೆ ಜ್ಞಾನ ದೊರೆಯುತ್ತದೆ. ಅದಲ್ಲದೆ, ಪ್ರಥಮ ಚಿಕಿತ್ಸೆಯಲ್ಲಿ ಸಾಮಾನ್ಯ ಅಪಘಾತಗಳ ಬಗ್ಗೆ ಜ್ಞಾನ ದೊರೆಯುತ್ತದೆ. | **ತಾತ್ವಿಕ:**<br>1) ಶಾಲಾ ಆರೋಗ್ಯದ ಶಿಕ್ಷಣ ಚಟುವಟಿಕೆ ಗಳು, ಅರ್ಥ, ಆವರಣ, ಕೊಠಡಿ, ಶೌಚಾಲಯಗಳು, ಮೈದಾನ<br>2) ಶಾಲಾ ಉಪಹಾರ ವ್ಯವಸ್ಥೆ, ಶುಚಿತ್ವ, ಎಚ್ಚರಿಕೆ ಕ್ರಮಗಳು<br>3) ಸಮತೋಲನ ಮತ್ತು ಸತ್ವಪೂರ್ಣ ಆಹಾರ ಸೇವನೆಯ ಅಗತ್ಯ. ಕ್ರೀಡಾಪಟು ಗಳಿಗೆ ಇದರಿಂದಾಗುವ ಪರಿಣಾಮಗಳು<br>4) ವ್ಯಾಯಾಮಗಳು, ವಿಶ್ರಾಂತಿ, ನಿದ್ದೆ ಇವುಗಳ ಅವಶ್ಯಕತೆ<br>5) ಹವ್ಯಾಸಗಳು, ಸಮಯ ಪ್ರಜ್ಞೆ, ಸರದಿ ಪದ್ಧತಿ<br>6) ಪ್ರಥಮ ಚಿಕಿತ್ಸೆ, ರಕ್ತಸ್ರಾವ, ಉಳುಕು, ಮೂಳೆ ಮುರಿತ | ವಿದ್ಯಾರ್ಥಿಗಳಿಗೆ ಶಾಲಾ ಆವರಣ ಸ್ವಚ್ಛವಾಗಿಡುವಂತೆ ಬೋಧಿಸುತ್ತಾರೆ. ಮತ್ತು ವೈಯಕ್ತಿಕ ಸ್ವಚ್ಛತೆಗಳಾದ ಕೂದಲು, ಚರ್ಮ, ಹಲ್ಲು, ಉಗುರು ಇತ್ಯಾದಿಗಳ ಬಗ್ಗೆ ತಪಾಸಣೆ ಮಾಡುವುದರ ಮೂಲಕ ಜಾಗೃತಿ ಉಂಟುಮಾಡುತ್ತಾರೆ. ಮತ್ತು ಪ್ರಥಮ ಚಿಕಿತ್ಸೆಯಲ್ಲಿ ರಕ್ತಸ್ರಾವವಾದಾಗ, ಮೂಳೆ ಮುರಿದಾಗ ತೆಗೆದು ಕೊಳ್ಳ ಬೇಕಾದ ಕ್ರಮ ಕುರಿತು ಬೋಧಿಸುತ್ತಾರೆ. | 5 |

**ಪ್ರಶ್ನೆಪತ್ರಿಕೆ, ಅಂಕಗಳು ಹಾಗೂ ಮೌಲ್ಯಮಾಪನ**

- 1 ರಿಂದ 4ನೇ ತರಗತಿಗಳಿಗೆ ನಿರಂತರ ಮೌಲ್ಯಮಾಪನ, ಸಾಮರ್ಥ್ಯಗಳನ್ನು ಗಳಿಸಿರುವ ಬಗ್ಗೆ.
- 5ನೇ ತರಗತಿಗೆ-ಇತರೆ ವಿಷಯಗಳಂತೆಯೇ ಮೌಲ್ಯಮಾಪನ ಮಾಡಿ ಅಂಕದಾನ ಮಾಡಿ ಗ್ರೇಡ್(ಶ್ರೇಣಿ) ನೀಡುವುದು.
- 6 ರಿಂದ 9ನೇ ತರಗತಿಗೆ ದೈಹಿಕ ಶೀಕ್ಷಣ, ಆರೋಗ್ಯ ಶಿಕ್ಷಣ ಮತ್ತು ಯೋಗ ಶಿಕ್ಷಣಕ್ಕೆ ಪ್ರಶ್ನೆಪತ್ರಿಕೆ, ಅಂಕಗಳು ಹಾಗೂ ಮೌಲ್ಯಮಾಪನವನ್ನು ಇತರೆ ವಿಷಯಗಳಿಗೆ ನೀಡಿರುವಂತೆ ಅದೇ ಮಾದರಿಯಲ್ಲಿ ತಾತ್ವಿಕ ಹಾಗೂ ಪ್ರಾಯೋಗಿಕ ವಿಭಾಗಗಳಿಗೆ 40:60 ರಂತೆ ಹಂಚಿಕೆ ಮಾಡಬೇಕಾಗುತ್ತದೆ.
- 10ನೇ ತರಗತಿಗೆ ಒಂದನೇ ಸೆಮಿಸ್ಟಾರ್‌ನವರೆಗೂ ಇದೇ ಮಾದರಿ ಅನುಸರಿಸಬೇಕಾಗುತ್ತದೆ.

**ಅನುಬಂಧ - III**

**8 ರಿಂದ 10ನೇ ತರಗತಿ**

**8ನೇ ತರಗತಿಯ ವಾರ್ಷಿಕ ಅವಧಿಗಳ ಹಂಚಿಕೆ**

**ವಾರಕ್ಕೆ 4 ಅವಧಿಗಳಂತೆ ವರ್ಷಕ್ಕೆ 140 ಅವಧಿಗಳು**

| | | ಪ್ರಾಯೋಗಿಕ | ತಾತ್ವಿಕ | ಒಟ್ಟು |
|---|---|---|---|---|
| 1 | ಆಟಗಳು/ಕ್ರೀಡೆಗಳು | 25 | 15 | 40 |
| 2 | ಮೇಲಾಟಗಳು | 13 | 06 | 19 |
| 3 | ತಾಳಬದ್ಧ ಚಟುವಟಿಕೆಗಳು | 08 | - | 08 |
| 4 | ಯೋಗಾಸನಗಳು | 20 | 10 | 30 |
| 5 | ಪದಕವಾಯತು | 08 | - | 08 |
| 6 | ದೈಹಿಕ ಸಾಮರ್ಥ್ಯ ವರ್ಧಿಸುವ ವ್ಯಾಯಾಮಗಳು | - | - | - |
| 7 | ಆರೋಗ್ಯ ಶಿಕ್ಷಣ, ಸ್ವಚ್ಛತೆ ಮತ್ತು ಪ್ರಥಮ ಚಿಕಿತ್ಸೆ | - | 16 | 16 |
| 8 | ಮನೋರಂಜನಾ ಆಟಗಳು | 06 | - | 06 |
| 9 | ರಾಷ್ಟ್ರೀಯ ಭಾವೈಕ್ಯತೆಯ ಗೀತೆಗಳು | - | 08 | 08 |
| 10 | ಸೇತುಬಂಧ (ನಿಲಯ ರಚನೆ, ತಂಡಗಳ ರಚನೆ ಇತ್ಯಾದಿ) | 05 | - | 05 |
| | **ಒಟ್ಟು** | | **55** | **140** |

**ಎಂಟನೇ ತರಗತಿಯ ಅಭ್ಯಾಸ ಕ್ರಮ-ಪ್ರಾಯೋಗಿಕ**

| ಸಾಮರ್ಥ್ಯ | ವಿಷಯ ಚಟುವಟಿಕೆ | ಮಾರ್ಗೋಪಾಯ |
|---|---|---|
| 1. ಉತ್ತಮ ದೈಹಿಕ ಬೆಳವಣಿಗೆ<br>2. ದೇಹ ಮತ್ತು ಮನಸ್ಸಿನ ಹೊಂದಾಣಿಕೆ/ ಲಯಬದ್ಧತೆ<br>3. ಏಕಾಗ್ರತೆ ಹೆಚ್ಚಳ | **ವಾಲೀಬಾಲ್ ( 8 ಅವಧಿ)**<br>1. ಜಂಪ್ ಸರ್ವಿಸ್ 2. ಬಾಡಿ ಟರ್ನ್ ಮತ್ತು ಸ್ಮಾಷ್<br>3. ಸಿಂಗಲ್ ಬ್ಲಾಕ್ 4. ಪೆಟ್ಟಿಂಗ್‌ದ ಬಾಲ್<br>5. ಡಬಲ್ ಬ್ಲಾಕ್ 6. ರಿಸೀವ್ ಅಂಡ್ ರೋಲ್ | ನಮೂದಿಸಿರುವ ಕೌಶಲ್ಯಗಳನ್ನು ಮಾಡಿ ತೋರಿಸಿ ವಿದ್ಯಾರ್ಥಿಗಳಿಂದ ಅಭ್ಯಾಸ ಮಾಡಿಸುವುದು. |

| ಸಾಮರ್ಥ್ಯ | ವಿಷಯ ಚಟುವಟಿಕೆ | ಮಾರ್ಗೋಪಾಯ |
|---|---|---|
| 1. ಕಾಲುಗಳ ಸ್ನಾಯುಗಳಿಗೆ ಉತ್ತಮ ವ್ಯಾಯಾಮ<br>2. ವೇಗವರ್ಧನೆ | **ಫುಟ್‌ಬಾಲ್ ( 5 ಅವಧಿ)**<br>1. ಪಾಸ್ - ಚಲಿಸುತ್ತಾ ಚಂಡನ್ನು ನೆಲದ ಮೇಲೆ ಮತ್ತು ಗಾಳಿಯಲ್ಲಿ ಪಾಸ್ ನೀಡುವುದು.<br>2. ಎದೆಯಿಂದ ಚಂಡನ್ನು ತಡೆಯುವುದು<br>3. ನಿರ್ದಿಷ್ಟ ಸ್ಥಳಕ್ಕೆ ಚಂಡನ್ನು ಒದೆಯುವುದು<br>4. ಕೌಶಲ್ಯಗಳ ಅಭ್ಯಾಸ | ಮೇಲೆ ತಿಳಿಸಿರುವಂತೆ |
| 1. ಹಸ್ತ ಮತ್ತು ಬೆರಳುಗಳ ಶಕ್ತಿವರ್ಧನೆ<br>2. ದಿಕ್ಕು ಬದಲಾವಣೆ ಮತ್ತು ಶೀಘ್ರಚಲನೆ<br>3. ನಿರ್ಣಯ ತೆಗೆದುಕೊಳ್ಳುವ ಸಾಮರ್ಥ್ಯ | **ಹ್ಯಾಂಡ್‌ಬಾಲ್ ( 5 ಅವಧಿ)**<br>1. ಹಿಡಿತ, ನಿಲ್ಲುವ ಬಗೆ, ಪೊಸಿಷನ್<br>2. ಪಾಸಿಂಗ್ ಮತ್ತು ರಿಸೀವಿಂಗ್<br>3. ಡ್ರಿಬ್ಲಿಂಗ್<br>4. ಎಸೆತಗಳುಗಿೋಲು ಎಸೆತ, ನೆಗೆತ ಎಸೆತ, ಬೀಳುತ್ತಾ ಎಸೆತ, ಪಕ್ಕಗಳಿಗೆ ಬೀಳುತ್ತಾ ಎಸೆಯುವುದು, ಮಧ್ಯ ಎಸೆತ ಮತ್ತು ನೇರ ಎಸೆತ | ಮೇಲೆ ತಿಳಿಸಿರುವಂತೆ |

**ಎಂಟನೇ ತರಗತಿಯ ಅಭ್ಯಾಸ ಕ್ರಮ-ಪ್ರಾಯೋಗಿಕ**

| ಸಾಮರ್ಥ್ಯ | ವಿಷಯ ಚಟುವಟಿಕೆ | ಮಾರ್ಗೋಪಾಯ |
|---|---|---|
| • ಕಣ್ಣು ಮತ್ತು ಕೈಗಳ ಹೊಂದಾಣಿಕೆ<br>• ಮಣಿಕಟ್ಟು ಮತ್ತು ಕೈಗಳು ಬಳಗೊಳ್ಳುವುವು | **ಬಾಲ್ ಬ್ಯಾಡ್ಮಿಂಟನ್ ( 5 ಅವಧಿ)**<br>1. ಸರ್ವೀಸ್- ಅ.ಸರಳ ವಿಧಾನ ಆ.ಸ್ಪಿನ್ ಸರ್ವೀಸ್<br>ಇ.ಹೈಸ್ಪಿನ್ ಸರ್ವೀಸ್<br>2. ರಿಸೀವಿಂಗ್ - ತಲೆಯ ಮೇಲಿನ ಪಾಸ್<br>ಮುಂಗೈ ಮತ್ತು ಹಿಂಗೈ ಹೊಡೆತ<br>ಕೆಳಗೈ ಹೊಡೆತ<br>ಪೂರಕ ಆಟಗಳು, ಪೂರಕ ವ್ಯಾಯಾಮಗಳು | ಮೇಲೆ ತಿಳಿಸಿರುವಂತೆ ಚಟುವಟಿಕೆಗಳಿಗೆ ಪೂರಕ ವ್ಯಾಯಾಮಗಳನ್ನು ಮಾಡಿಸಿ ಅಭ್ಯಾಸ ಮಾಡಿಸುವುದು. |
| • ನರ-ಸ್ನಾಯು ಹೊಂದಾಣಿಕೆ<br>• ಏಕಾಗ್ರತೆ<br>• ದೃಢತೆ | **ಹಾಕಿ ( 6 ಅವಧಿ)**<br>1. ಗಾಳಿಯಲ್ಲಿ ಅಥವಾ ಎತ್ತರದಲ್ಲಿ ಬರುವ ಚಂಡನ್ನು ಪಡೆಯುವುದು<br>2. ಫ್ರೀ ಹಿಟ್-16 ಯಾರ್ಡ್ ಮತ್ತು 25 ಯಾರ್ಡ್<br>3. ಕಾರ್ನರೆ ಹೊಡೆತ-ಲಾಂಗ್ ಕಾರ್ನರ್ & ಶಾರ್ಟ್ ಕಾರ್ನರ್<br>4. ಗೋಲ್ ಕೀಪಿಂಗ್-ಕೈಯಿಂದ ತಡೆಯುವುದು ಮತ್ತು ಕಾಲಿಂದ ಒದೆಯುವುದು<br>5. ಡೈವಿಂಗ್ ಮತ್ತು ಟ್ಯಾಕ್ಲಿಂಗ್ | ಉಪಕರಣಗಳ ಸಹಾಯದಿಂದ ಕೌಶಲ್ಯಗಳನ್ನು ಮಾಡಿ ತೋರಿಸಿ ವಿದ್ಯಾರ್ಥಿಗಳಿಂದ ಅಭ್ಯಾಸ ಮಾಡಿಸುವುದು. |

**ಎಂಟನೇ ತರಗತಿಯ ಅಭ್ಯಾಸ ಕ್ರಮ-ಪ್ರಾಯೋಗಿಕ**

| ಸಾಮರ್ಥ್ಯ | ವಿಷಯ ಚಟುವಟಿಕೆ | ಮಾರ್ಗೋಪಾಯ |
|---|---|---|
| • ವೇಗ ಸಾಮರ್ಥ್ಯ ಗಳಿಕೆ<br>• ಗುರು ಸಾಧನೆ ಮಾಡುವ ಛಲ<br>• ಚಪಲತೆ ಹೆಚ್ಚಳ<br>• ಪ್ರತಿಕ್ರಿಯೆಯ ವೇಗ | **ಮೇಲಾಟಗಳು ( 6 ಅವಧಿ)**<br>ವೇಗದ ಓಟಗಳು:<br>1. ನಿರ್ದಿಷ್ಟ ಪೂರ್ವಸಿದ್ಧತಾ ವ್ಯಾಯಾಮಗಳು (Specific Conditioning exercises)<br>2. ಓಟದ/ಓಡುವ ಕ್ರಮ (Running action), ಪುನರಾವರ್ತನೆ<br>3. ಪ್ರಾರಂಭಗಳು-ಕ್ರೌಚ್, ಬಂಚ್, ಮೀಡಿಯಂ ಮತ್ತು ಎಲಾಂಗೇಟೆಡ್<br>4. ಮುಕ್ತಾಯ-ರನ್ ಥ್ರೂ(ಪುನರಾವರ್ತನೆ) ಲೌಂಜ್ ಶೌಲ್ಡರ್ ಶ್ರಗ್ | ನಿರಂತರ ಅಭ್ಯಾಸ ಕ್ರಮ ಮತ್ತು ಮೇಲ್ವಿಚಾರಣೆಯಿಂದ ತಪ್ಪುಗಳ ತಿದ್ದುವಿಕೆಯಿಂದ ಅಭ್ಯಾಸ ಮಾಡಿಸುವುದು |
| • ಎಂಡ್ಯೂರೆನ್ಸ್ ಹೆಚ್ಚಳ<br>• ಶ್ವಾಸಕೋಶದ ಸಾಮರ್ಥ್ಯ ಹೆಚ್ಚಳ<br>• ಹೃದಯ ಬಲಗೊಳ್ಳುವುದು | **ಮಧ್ಯ-ಅಂತರ ಓಟಗಳು ( 6 ಅವಧಿ)**<br>1. ಓಟದಲ್ಲಿ ಕೈ-ಕಾಲುಗಳ ಚಲನೆ<br>2. ಅರ್ಧಬಾಗಿ ಪ್ರಾರಂಭ ಮತ್ತು ದೇಹದ ಕೋನ<br>3. ಮುಕ್ತಾಯ-ದಾರವನ್ನು ಮುಟ್ಟಿ ಮುಕ್ತಾಯ<br>4. ನಿರ್ದಿಷ್ಟ ಪೂರ್ವಸಿದ್ಧತಾ ವ್ಯಾಯಾಮಗಳು | ಮೇಲಿನಂತೆ |
| • ಮೀನಖಂಡಗಳು ಮತ್ತು ಕಾಲಿನ ಸ್ನಾಯುಗಳು ಬಲಗೊಳ್ಳುವವು | **ಟ್ರಿಪ್ಪಲ್ ಜಂಪ್ - ತ್ರಿವಿಧ ಜಿಗಿತ (4 ಅವಧಿ)**<br>1. ತ್ರಿವಳಿ ನೆಗೆತಕ್ಕೆ ಸಂಬಂಧಿಸಿದ ಪೂರ್ವಸಿದ್ಧತಾ ವ್ಯಾಯಾಮಗಳು<br>2. ಲ್ಯಾಂಡಿಂಗ್ ಶೈಲಿಗಳು-ಕೊಲ್ಯಾಪ್ಸ್, ಸೈಡ್ ಫಾಲ್ ಓಔಟ್<br>3. ಚೆಕ್ ಮಾರ್ಕ್/ಹಾಪ್ ಸ್ಟೆಪ್<br>4. ಗಾಳಿಯಲ್ಲಿನ ಚಲನೆ-ಸೈಲ್, ಹಿಚ್ ಕಿಕ್ | ಮೇಲಿನಂತೆ |

**ಎಂಟನೇ ತರಗತಿಯ ಅಭ್ಯಾಸ ಕ್ರಮ-ಪ್ರಾಯೋಗಿಕ**

| ಸಾಮರ್ಥ್ಯ | ವಿಷಯ ಚಟುವಟಿಕೆ | ಮಾರ್ಗೋಪಾಯ |
|---|---|---|
| • ಕೈಬಳ ಬಲವರ್ಧನೆ<br>• ಆತ್ಮವಿಶ್ವಾಸದ ಹೆಚ್ಚಳ | **ಡಿಸ್ಕಸ್ ಎಸೆತ (8 ಅವಧಿ)**<br>1. ಡಿಸ್ಕಸ್‌ಗೆ- ಸಂಬಂಧಿಸಿದಂತೆ ನಿಗದಿತ ಪೂರ್ವಸಿದ್ಧತಾ ವ್ಯಾಯಾಮಗಳು<br>2. ಹಿಡಿಯುವಿಕೆ ಮತ್ತು ನಿಂತು ಎಸೆಯುವುದು | ಅನುಕರಣೆಯಂತೆ ಅಭ್ಯಾಸ ಮಾಡಿಸುವುದು |
| • ಎಕ್ಸ್‌ಪ್ಲೋಸಿವ್ ಸ್ಟ್ರೆಂಥ್<br>• ಬೆನ್ನು ಸರಪಳಿಯ ಸ್ಥಿತಿ ಸ್ಥಾಪಕತ್ವದ ಹೆಚ್ಚಳ<br>• ದೃಢತೆ, ಸಮತೋಲನ ಹೆಚ್ಚಳ | **ಎತ್ತರ ಜಿಗಿತ(4 ಅವಧಿ)**<br>1. ಎತ್ತರ ಜಿಗಿತಕ್ಕೆ ಸಂಬಂಧಿಸಿದ ಪೂರ್ವಸಿದ್ಧತಾ ವ್ಯಾಯಾಮಗಳು<br>2. ಅಪ್ರೋಚ್ ರನ್ ಮತ್ತು ಟೇಕ್ ಆಫ್<br>3. ವೆಸ್ಟ್ರನ್ ರೋಲ್ ಶೈಲಿಯಂತೆ ಕ್ರಾಸ್ ಬಾರ್ ದಾಟುವುದು<br>4. ಲ್ಯಾಂಡಿಂಗ್ | ಮೇಲಿನಂತೆ |

| ಸಾಮರ್ಥ್ಯ | ವಿಷಯ ಚಟುವಟಿಕೆ | ಮಾರ್ಗೋಪಾಯ |
|---|---|---|
| • ಎಂಡ್ಯೂರೆನ್ಸ್ ಹೆಚ್ಚುವುದು<br>• ಹೃದಯದ ಕಾರ್ಯಕ್ಷಮತೆ ಹೆಚ್ಚುವುದು | **ಘಟಕ-3**<br>**ತಾಳಬದ್ಧ ಚಟುವಟಿಕೆಗಳು (ಹಿಂದಿ ಲೆಝೀಮ್)**<br>1. ಮೂಲಭೂತ ಆಜ್ಞೆಗಳ ವಿವರಣೆ<br>2. ಆಠ್ ಆವಾಜ್<br>3. ಕದಂ ಥಾಲ್<br>4. ಆಗೇ ಪಾವ್<br>5. ಪವಿತ್ರ<br>6. ಕಲಿಸಿದವರುಗಳ ಅಭ್ಯಾಸ | ಅನುಕರಣಾ ವಿಧಾನದಂತೆ ವಿದ್ಯಾರ್ಥಿಗಳಿಗೆ ಅಭ್ಯಾಸ ಮಾಡಿಸುವುದು. |

ಎಂಟನೇ ತರಗತಿಯ ಅಭ್ಯಾಸ ಕ್ರಮ-ಪ್ರಾಯೋಗಿಕ

| ಸಾಮರ್ಥ್ಯ | ವಿಷಯ ಚಟುವಟಿಕೆ | ಮಾರ್ಗೋಪಾಯ |
|---|---|---|
| • ಹೃದಯದ ಕಾರ್ಯಕ್ಷಮತೆ ಹೆಚ್ಚುವುದು<br>• ಶ್ವಾಸಕೋಶದ ಬಲವರ್ಧನೆ<br>• ದೈಹಿಕ ಸಾಮರ್ಥ್ಯ ಹೆಚ್ಚಳ | **2) ಏರೋಬಿಕ್ಸ್**<br>1. ಗ್ರೇಪ್ (Grape)<br>2.ಗ್ರೇಪ್ ವೈನ್ ವಿತ್ ಪಿವೋಟಿ (Grape wine with pivot)<br>3.Mamboo<br>4.Mamboo with pivot<br>5.Cha Cha Cha khn raise<br>6.Hand raise<br>7.Jogging on spot<br>8.Pumping | ಅನುಕರಣಾ ಪದ್ಧತಿಯಂತೆ ವಿದ್ಯಾರ್ಥಿಗಳಿಂದ ಎಣಿಕೆಯಂತೆ ಅಭ್ಯಾಸ ಮಾಡಿಸುವುದು |
| • ಏಕಾಗ್ರತೆ<br>• ದೈಹಿಕ ಕಾರ್ಯ ಕ್ಷಮತೆ ಹೆಚ್ಚಳ<br>• ಮೈ ಮಾಣಿತ ಹೆಚ್ಚಳ | **ಘಟಕ 4- ಯೋಗಾಸನ (25 ಅವಧಿ)**<br>ಅ. ನಿಂತು ಮಾಡುವ ಆಸನಗಳು/ಲಘು ವ್ಯಾಯಾಮ<br>ಪ್ರತಿ ತರಗತಿಗೆ ಮುಂಚೆ (5 ಅವಧಿ)<br>1. ಪಾರ್ಶ್ವ ಕೋನಾಸನ<br>2. ಪರಿವೃತ್ತಿ ತ್ರಿಕೋನಾಸನ<br>3. ಅರ್ಧ ಚಕ್ರಾಸನ<br>4. ಉಷ್ಟ್ರಾಸನ<br>5. ಪ್ರಸಾರಿತ ಪದೋತ್ತಾನಾಸನ | ಅನುಕರಣಾ ಪದ್ಧತಿಯಂತೆ ಕಲಿಕೆ |

ಎಂಟನೇ ತರಗತಿಯ ಅಭ್ಯಾಸ ಕ್ರಮ-ಪ್ರಾಯೋಗಿಕ

| ಸಾಮರ್ಥ್ಯ | ವಿಷಯ ಚಟುವಟಿಕೆ | ಮಾರ್ಗೋಪಾಯ |
|---|---|---|
| • ಹೃದಯ, ಶ್ವಾಸಕೋಶಗಳ ಕಾರ್ಯಕ್ಷಮತೆ ಹೆಚ್ಚುವುದು<br>• ಏಕಾಗ್ರತೆ<br>• ಸಂಯಮ<br>• ಮೈಮಾಣಿತ<br>• ದೈಹಿಕ ಸಾಮರ್ಥ್ಯ ಹೆಚ್ಚುವುದು | **ಅ. ಕುಳಿತು ಮಾಡುವ ಆಸನಗಳು (5 ಅವಧಿ)**<br>1. ಅರ್ಧಯ ಮತ್ಸ್ಯೇಂದ್ರಾಸನ 2. ಗೋಮುಖಾಸನ<br>3. ಪಶ್ಚಿಮೋತ್ತಾಸನ 4. ಅರ್ಧಬದ್ಧ ಪಶ್ಚಿಮೋತ್ತಾಸನ<br>5. ಏಕಪಾದ ಶೀರ್ಷಾಸನ<br>**ಇ. ಮಲಗಿ ಮಾಡುವ ಆಸನಗಳು (5 ಅವಧಿ)**<br>1. ಮತ್ಸ್ಯಾಸನ 2. ಸರ್ವಾಂಗಾಸನ<br>3. ರಾಜ ಕಪೋತಾಸನ 4. ಧನುರಾಸನ<br>5. ಸಿಂಹಾಸನ<br>**ಈ. ಪ್ರಾಣಾಯಾಮ-ಉಸಿರಾಟ ವ್ಯಾಯಾಮ (5 ಅವಧಿ)**<br>1. ಆದ್ಯಶ್ವಾಸ - ಗ್ರೀವಶ್ವಾಸ - ಭುಜದ ಶ್ವಾಸ<br>2. ಸಂಪೂರ್ಣ ಯೋಗಿಕ ಉಸಿರಾಟ<br>**ಪ್ರಾಣಾಯಾಮ (5 ಅವಧಿ)**<br>1. ಅನುಲೋಮ ವಿಲೋಮ<br>2. ಚಂದ್ರಾನುಲೋಮ<br>3. ಸೂರ್ಯಾನುಲೋಮ<br>4. ಧ್ಯಾನ, ಪ್ರಾಥಮಿಕ ಅಭ್ಯಾಸ, ಸುಗುಣ ಧ್ಯಾನ | ಚಿತ್ರಗಳನ್ನು ತೋರಿಸುವುದರ ಮೂಲಕ, ಆಸನಗಳನ್ನು ಮಾಡಿ ತೋರಿಸಿ, ಅನುಕರಣೆ ಮಾಡಿಸಿ, ಅಭ್ಯಾಸ ಮಾಡಿಸುವುದು. |

ಎಂಟನೇ ತರಗತಿಯ ಅಭ್ಯಾಸ ಕ್ರಮ-ಪ್ರಾಯೋಗಿಕ

| ಸಾಮರ್ಥ್ಯ | ವಿಷಯ ಚಟುವಟಿಕೆ | ಮಾರ್ಗೋಪಾಯ |
|---|---|---|
| • ಮಾನಸಿಕ ಸ್ಥಿರತೆ<br>• ದೈಹಿಕ ಕಾರ್ಯಕ್ಷಮತೆ<br>• ಸರ್ವಾಂಗೀಣ ಬೆಳವಣಿಗೆ | **ಘಟಕ-5-ಪದಕವಾಯಿತು (10 ಅವಧಿ)**<br>1. ದೌಡ್ ಕೆ ಚಲ್<br>2. ಥೇಜ್ ಚಲ್ ಮೆ ಕದಂ ಚಲ್<br>3. ತೇಜ್ ಚಲ್ ಮೆ ಥಾಮ್<br>4. ಕದಂದ ತಾಲ್ ಸೆ ಆಗೇ ಬಡ್<br>5. ದೌಡ್ ಚಲ್ ಮೆ ಕದಂ ತಾಲ್<br>6. ದೌಡ್ ಚಲ್ ಮೆ ಥಾಂ<br>7. ದೌಡ್ ಚಲ್ ಮೆ ದೈನೆ/ಬಾಯೆ/ಪೀಛೆ ಮೂಡ್<br>8. ತೇಜ್ ಚಲ್ ಮೆ ದೈನೆ/ಬಾಯೆ/ಪೀಛೆ ಮೂಡ್<br>9. ಸಾಲು ವಿಭಜನೆ-ಏಕ್ ದೋ ಗಿಂತೀಕರ್, ನಂಬರ್ ಏಕ್- ಏಕ್ ಕದಂ ಆಗೆ, ನಂಬರ್ ದೋ-ಏಕ್ ಕದಂ ಪೀಛೆ, ಆಗೇ ಪೀಛೇ ಚಲ್, ನಂಬರ್ ಏಕ್ ದೈನೇ, ನಂಬರ್ ದೋ ಬಾಯೇ ದೈನೆ ಬಾಯೇ ಮೂಡ್ ತೀನ್ ಲೈನ್ ಬನ್ ತೇಜ್ ಚಲ್ | ಮೂಲ ಆಜ್ಞೆಗಳ ವಿವರಣೆ ನೀಡಿ, ಎಣಿಕೆಯಂತೆ ಮಾಡಿ ತೋರಿಸಿ, ಅಭ್ಯಾಸ ಮಾಡಿಸುವುದು. |

ಎಂಟನೇ ತರಗತಿಯ ಅಭ್ಯಾಸ ಕ್ರಮ-ಪ್ರಾಯೋಗಿಕ

| ಸಾಮರ್ಥ್ಯ | ವಿಷಯ ಚಟುವಟಿಕೆ | ಮಾರ್ಗೋಪಾಯ |
|---|---|---|
| | **ಘಟಕ-6 ಮನರಂಜನೆಯ ಆಟಗಳು (7 ಅವಧಿ)**<br>ಅನುಬಂಧ ಒಂದರಲ್ಲಿಯ 25 ರಿಂದ 36 ರವರೆಗೆ | |
| | ಘಟಕ-7 ರಾಷ್ಟ್ರೀಯ ಭಾವೈಕ್ಯತೆಯ ಗೀತೆಗಳು (9 ಅವಧಿಗಳು)<br>ಪುಣ್ಯ ಭಾರತ | |

**ದೈಹಿಕ ಶಿಕ್ಷಣ, ಆರೋಗ್ಯ ಶಿಕ್ಷಣ ಮತ್ತು ಯೋಗ ಶಿಕ್ಷಣ ಮೌಲ್ಯಮಾಪನ**

ಇತರೆ ವಿಷಯಗಳಲ್ಲಿ ಮೌಲ್ಯಮಾಪನ ನಡೆಯುವ ರೀತಿಯಲ್ಲೆ ದೈಹಿಕ ಶಿಕ್ಷಣ, ಆರೋಗ್ಯ ಶಿಕ್ಷಣ ಮತ್ತು ಯೋಗ ಶಿಕ್ಷಣದಲ್ಲಿಯೂ ಕೂಡ ಮೌಲ್ಯಮಾಪನ ಮಾಡಬೇಕು.

**ಎಂಟನೇ ತರಗತಿ ಪಠ್ಯ ವಿಷಯ**

| ಸಾಮರ್ಥ್ಯ | ವಿಷಯ (ಚಟುವಟಿಕೆ) | ಮಾರ್ಗೋಪಾಯ/ಚಟುವಟಿಕೆ |
|---|---|---|
| ಕ್ರೀಡೆಗಳ ಪರಿಚಯದೊಂದಿಗೆ ದೇಹವನ್ನು ದೃಢಗೊಳಿಸಿಕೊಂಡು, ಸ್ಥೈರ್ಯ, ಸಾಹಸ, ಏಕಾಗ್ರತೆ, ಸರ್ವತೋಮುಖ ಬೆಳವಣಿ ಗೆ ಯಾ ಗುತ್ತದೆ. | **ಕ್ರೀಡೆಗಳು**<br>ವಾಲಿಬಾಲ್, ಫುಟ್‌ಬಾಲ್, ಹಾಕಿ, ಹ್ಯಾಂಡ್‌ಬಾಲ್, ಬಾಲ್ ಬ್ಯಾಡ್ಮಿಂಟನ್-ಆಟಗಳ ಇತಿಹಾಸ, ಸಾಧನೆಗಳು, ಪ್ರಶಸ್ತಿಗಳು, ಅಂತರಾಷ್ಟ್ರೀಯ ಬೆಳವಣಿಗೆ, ವೈಜ್ಞಾನಿಕ ರೀತಿಯಲ್ಲಿ ಆಟವಾಡುವ ವಿಧಾನ, ಪ್ರಶ್ನೆಪತ್ರಿಕೆ, ಅಂತರಾಷ್ಟ್ರೀಯ ಆಟಗಾರರ ಪರಿಚಯ, ಭಾರತದ ಪ್ರಸಿದ್ಧ ಆಟಗಾರರು, ಅವರ ಸ್ಥಿತಿ, ಅಂಕಣದ ಪರಿಚಯ, ಉಪಕರಣಗಳ ಪರಿಚಯ | ಪ್ರಾಯೋಗಿಕಕ್ಕೆ ಪೂರಕವಾದ ವಿಷಯವನ್ನು ಶಿಕ್ಷಕರಿಂದ ಪಡೆದು ಪುಸ್ತಕದಲ್ಲಿ ಬರೆದುಕೊಂಡು ಸಮಯಕ್ಕೆ ಉಪಯೋಗಿಸಿಕೊಳ್ಳುತ್ತಾರೆ. |
| ಮಗುವಿನ ಸಾಮರ್ಥ್ಯವನ್ನು ಓಟಗಳಿಂದ ಪಡೆಯುತ್ತಾರೆ. ವೇಗವನ್ನು ಉತ್ತಮಗೊಳಿಸಿ ಕೊಂಡು ಕೌಶಲ್ಯಗಳನ್ನು ತಿಳಿದುಕೊಳ್ಳುತ್ತಾರೆ | **ಮೇಲಾಟಗಳು**<br>ಮಧ್ಯದ ಹಾಗು ದೂರ ಓಟಗಳು, ಮೂಲಭೂತ ಆಟದ ನಿಯಮಗಳು, ಓಟದ ಪ್ರಾರಂಭ, ತಪ್ಪು ಓಟ ಪ್ರಾರಂಭ, ಸ್ಟಾರ್ಗ, ತ್ರಿವಿದ ಜಿಗಿತ ಓಣಿಗಳು, ತ್ರಿವಿಧ ಜಿಗಿತದಲ್ಲಿ ತಪ್ಪು ಜಿಗಿತ, ಪ್ರಸಿದ್ಧ ಆಟಗಾರರ, ಜಾವಲಿನ್ ಎಸೆತದ ಅಂಕಣ, ಎತ್ತರ ಜಿಗಿತದ ಅಂಕಣ, ಆಟದ ನಿಯಮ, ಸಾಮಾನ್ಯ ನಿಯಮ, ಸ್ಪರ್ಧೆಯ ನಿಯಮಗಳು | ಅಂಕಣಗಳಲ್ಲಿ ಶಿಕ್ಷಕರು ಪ್ರಾಯೋಗಿಕವಾಗಿ ಅಭ್ಯಾಸಗಳ ಮೂಲಕ ಕಲಿತು ಅನುಸರಿಸುತ್ತಾರೆ. |
| ಯೋಗದ ನಿಜವಾದ ಅರ್ಥವನ್ನು ಯೋಗದ ಮಾರ್ಗವನ್ನು ಅರಿತು ದೇಹವನ್ನು ದೃಡಗೊಳಿಸಿ ಕೊಂಡು, ಮನಸ್ಸನ್ನು ಶಾಂತಗೊಳಿಸುವುದಕ್ಕೆ ಸಾಧ್ಯ ವಾಗುತ್ತದೆ | **ಯೋಗಾಸನ**<br>ಯೋಗದ ಪರಿಚಯ-ವ್ಯಾಖ್ಯೆ, ವ್ಯಾಯಾಮ, ಯೋಗಕ್ಕಿರುವ ವ್ಯತ್ಯಾಸ-ಯೋಗದ ಪಥಗಳು ಹಾಗೂ ಯೋಗಾಸನದ ಅವಶ್ಯಕತೆ.<br>ಅಷ್ಟಾಂಗ ಯೋಗಗಳು, ಅರ್ಥ, ಮಹತ್ವ, ಅವಶ್ಯಕತೆ, ಪ್ರಾಣಯಾಮದ ಅರ್ಥ, ಮಹತ್ವ ಮತ್ತು ಪೂರ್ವಸಿದ್ಧತೆ | ಶಿಕ್ಷಕರು ತಿಳಿಸುವ ಮೂಲಕ ವಿದ್ಯಾರ್ಥಿಗಳು ಅನುಸರಿಸುತ್ತಾ ಹೋಗುತ್ತಾರೆ. |

| ಸಾಮರ್ಥ್ಯ | ವಿಷಯ (ಚಟುವಟಿಕೆ) | ಮಾರ್ಗೋಪಾಯ/ಚಟುವಟಿಕೆ |
|---|---|---|
| ಮಗುವಿನ ಆರೋಗ್ಯದ ಬಗ್ಗೆ ಅರಿವು, ಭಾವನೆಗಳ ಪ್ರಯೋಜನೆ, ತುಲನೆ ಮೂಲಕ ತಿಳಿದುಕೊಳ್ಳುತ್ತಾರೆ | **ಆರೋಗ್ಯ ಶಿಕ್ಷಣ, ವೈಯಕ್ತಿಕ ಸ್ವಚ್ಛತೆ ಮತ್ತು ಪ್ರಥಮ ಚಿಕಿತ್ಸೆ**<br>1. ಮಾನಸಿಕ ಆರೋಗ್ಯ ಅರ್ಥ, ಮಹತ್ವ<br>2. ಭಾವನೆಗಳು, ಸಕಾರಾತ್ಮಕ ಭಾವನೆಗಳು, ನಕಾರಾತ್ಮಕ ಭಾವನೆಗಳು, ತುಲನಾತ್ಮಕ ಭಾವನೆಗಳು, ಪ್ರಯೋಜನಗಳು<br>3. ಆಧುನಿಕ ಆಹಾರ ಪದ್ಧತಿ, ಆರೋಗ್ಯದ ಮೇಲೆ ಇದರ ಪ್ರಭಾವ<br>4. ಸುರಕ್ಷತಾ ವಿಧಾನಗಳು:ಮನೆಯಲ್ಲಿ, ತರಗತಿಯಲ್ಲಿ, ಹಾದಿಯಲ್ಲಿ, ಆಟದ ಮೈದಾನದಲ್ಲಿ, ಸಾರ್ವಜನಿಕ ಸ್ಥಳಗಳಲ್ಲಿ<br>**ಪ್ರಥಮ ಚಿಕಿತ್ಸೆ:** ಬೆಂಕಿ ತಗಲಿದವರಿಗೆ, ವಿಷ ಸೇವಿಸಿದಾಗ, ಪ್ರಜ್ಞೆ ತಪ್ಪಿದಾಗ<br>ಆರೋಗ್ಯಕರ ಪರಿಸರದ ಸಂಪರ್ಕಗಳು, ಪ್ರಯೋಜನಗಳು, ವಾಯುವಿಹಾರ, ವ್ಯಾಯಾಮ ಶಾಲೆಗಳು, ಏರೋಬಿಕ್ಸ್ ಸೆಂಟರ್, ಈಜುಕೊಳ, ಕ್ರೀಡಾ ತರಬೇತಿ ಕೇಂದ್ರಗಳು | ಶಿಕ್ಷಕರು ನೀಡಿದ ಶಿಕ್ಷಣದಂತೆ ವಿದ್ಯಾರ್ಥಿಗಳು ಅನುಸರಿಸುತ್ತಾರೆ |
| ರಾಷ್ಟ್ರಪ್ರೇಮವನ್ನು ಬೆಳಸಿಕೊಳ್ಳುತ್ತಾರೆ | **ರಾಷ್ಟ್ರೀಯ ಭಾವೈಕ್ಯತೆ**<br>ರಾಷ್ಟ್ರಧ್ವಜ, ರಾಷ್ಟ್ರಗೀತೆಗಳ ಇತಿಹಾಸ, ಪೌರತ್ವ, ನಾಗರಿಕ ಹಕ್ಕುಗಳು | |

**9ನೇ ತರಗತಿ ಪಠ್ಯ ಕ್ರಮ ಅವಧಿಗಳ ವಿತರಣೆಯ ವಿಷಯ:**

**(ಕಾರ್ಯ ಸೂಚಿ)**

ವಾರಕ್ಕೆ 4 ಅವಧಿಗಳಂತೆ ವರ್ಷಕ್ಕೆ 140 ಅವಧಿಗಳು:

| ಘಟಕ | ವಿಷಯಗಳು | ಪ್ರಾಯೋಗಿಕ | ತಾತ್ವಿಕ | ಒಟ್ಟು |
|---|---|---|---|---|
| 01 | ತಂಡ ಕೀಡೆಗಳು | 25 | 15 | 40 |
| 02 | ಮೇಲಾಟಗಳು(ಟ್ರ್ಯಾಕ್ & ಫೀಲ್ಡ್) | 13 | 06 | 19 |
| 03 | ತಾಳಬದ್ಧ ಚಟುವಟಿಕೆಗಳು | 08 | - | 08 |
| 04 | ಯೋಗಾಸನಗಳು | 20 | 10 | 30 |
| 05 | ಪದಕವಾಯತು. | 08 | - | 08 |
| 06 | ದೈಹಿಕ ಸಾಮರ್ಥ್ಯ ವರ್ಧಿಸುವ ವ್ಯಾಯಾಮಗಳು | - | - | - |
| 07 | ಆರೋಗ್ಯ ಶಿಕ್ಷಣ, ಸ್ವಚ್ಛತೆ ಮತ್ತು ಪ್ರಥಮ ಚಿಕಿತ್ಸೆ. | - | 16 | 16 |
| 08 | ಮನರಂಜನಾ ಆಟಗಳು | 06 | - | 06 |
| 09 | ರಾಷ್ಟ್ರೀಯ ಭಾವೈಕ್ಯತೆಯ ಗೀತೆಗಳು | - | 08 | 08 |
| 10 | ಸೇತು ಬಂಧ(ನಿಲಯ ರಚನೆ, ತಂಡಗಳ ರಚನೆ) | 05 | - | 05 |
| | **ಒಟ್ಟು** | - | - | **140** |

**ತರಗತಿ - 9. ತಾತ್ವಿಕ**

| ಕ್ರ.ಸಂ | ಸಾಮರ್ಥ್ಯ/ಉಪಸಾಮರ್ಥ್ಯಗಳು | ವಿಷಯ ಮತ್ತು ಚಟುವಟಿಕೆಗಳು | ಮಾರ್ಗೋಪಾಯಗಳು | ಅವಧಿ |
|---|---|---|---|---|
| 1 | 2 | 3 | 4 | 5 |
| 1 | ಘಟಕ-1<br>ನಿರ್ದಿಷ್ಟ ಆಟಗಳ/ಕ್ರೀಡೆಗಳ ಸಮಗ್ರ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು. | **"ಕ್ರೀಡೆಗಳು"**<br>**1) ಹಾಕಿ.**<br>1) ಅಂಕಣದಲ್ಲಿ ಆಟಗಾರರ ಸ್ಥಿತಿ ಮತ್ತು ಚಲನೆ.<br>2) ಹಾಕಿ ಕ್ರೀಡೆಗೆ ಬೇಕಾಗುವ ದೈಹಿಕ ಸಾಮರ್ಥಗಳ ಪರಿಚಯ<br>3) ತರಬೇತಿ ಮತ್ತು ಪಂಧ್ಯ ಪೂರ್ವದ ವ್ಯಾಯಾಮ ಪದ್ಧತಿ ಮತ್ತು ಆಹಾರ.<br>4) ಆಡುವ ತಾಂತ್ರಿಕತೆ<br>5) ಹಾಕಿ ಕ್ರೀಡೆಯ ಇತಿಹಾಸ.<br>6) ರಾಷ್ಟ್ರೀಯ & ಅಂತರ ರಾಷ್ಟ್ರೀಯ ಆಟಗಾರರ ಸಾಧನೆಗಳ ಪರಿಚಯ.<br>7) ಸಾಮಾನ್ಯ ನಿಯಮಗಳು.<br>8) ಆಟದ ವಿಧಾನ.<br>**2) ಹ್ಯಾಂಡ್ ಬಾಲ್**<br>1) ಆಟದ ಪರಿಚಯ.<br>2) ಅಂಕಣದ ಪರಿಚಯ.<br>3) ಕೌಶಲ್ಯಗಳ ಪರಿಚಯ.<br>4) ಆಟಗಾರರಲ್ಲಿರಬೇಕಾದ ದೈಹಿಕ ಮತ್ತು ಮನೋದಾರ್ಢ್ಯಗಳು.<br>5) ಸಾಮಾನ್ಯ ನಿಯಮಗಳು.<br>6) ಉಪಕರಣಗಳ ಪರಿಚಯ.<br>7) ಈ ಕ್ರೀಡೆಗೆ ಅವಶ್ಯಕವಿರುವ ದೈಹಿಕ ಸಾಮರ್ಥ್ಯಗಳ ಪರಿಚಯ.<br>**3) ಬ್ಯಾಸ್ಕೆಟ್ ಬಾಲ್**:-<br>1) ಅಂಕಣ ಮತ್ತು ಉಪಕರಣಗಳ ಪರಿಚಯ.<br>2) ಅಂಕಣ ರಚಿಸುವ ಮಾಹಿತಿ.<br>3) ಆಟಗಾರರ ಸ್ಥಾನ ಮತ್ತು ಚಲನೆ.<br>4) ರಾಷ್ಟ್ರೀಯ ಆಟಗಾರರ ಸಾಧನೆ.<br>5) ಆಟದ ಇತಿಹಾಸ<br>6) ವಿಶೇಷ ದೈಹಿಕ ಸಾಮರ್ಥ್ಯಗಳ ಪಟ್ಟಿ.<br>7) ಕ್ರೀಡಾ ಪಟುವಿನ ಆಹಾರ ಪದ್ಧತಿ. | 1) ಕ್ರೀಡಾ ಅಂಕಣಗಳ ಚಿತ್ರಗಳ ಪ್ರದರ್ಶನ.<br>2) ಕಪ್ಪು ಹಲಗೆಯ ಮೇಲೆ ಬಿಡಿಸುವುದು ಮತ್ತು ವಿದ್ಯಾರ್ಥಿಗಳಿಗೆ ಆಳತೆಗೆ ಅನುಗುಣವಾಗಿ ರಚಿಸುವಂತೆ ಸೂಚಿಸುವುದು.<br><br>ಸಂಬಂಧಿಸಿದ ಕ್ರೀಡಾ ಸಾಹಿತ್ಯದ ಪುಸ್ತಕಗಳನ್ನು ಆಭ್ಯಸಿಸುವುದು<br><br>ನಿಯಮಗಳನ್ನು ವಿಶ್ಲೇಷಿಸಿ ತಿಳಿಸುವುದು. | ಅವಧಿ<br>10 |

| 1 | 2 | 3 | 4 | 5 |
|---|---|---|---|---|
| 2 | ಘಟಕ 02<br>ನಿರ್ದಿಷ್ಠ ಮೇಲಾಟಗಳ ತಾತ್ವಿಕ ಜ್ಞಾನದ ಸಮಗ್ರ ಮಾಹಿತಿಯನ್ನು ತಿಳಿಸುವುದು | **ಮೇಲಾಟಗಳು**<br>1) ಎತ್ತರ ಜಿಗಿತ.<br>2) ಭರ್ಜಿ ಎಸೆತ.<br>3) ಮಧ್ಯಮ ದೂರದ ಓಟ<br>(ಎ) ಈ ಮೇಲಾಟಗಳಲ್ಲಿ ಭಾಗವಹಿಸಲು ಬೇಕಾಗುವ ವಿಶೇಷ ದೈಹಿಕ ಕ್ಷಮತೆಯ ವಿವರಗಳನ್ನು ತಿಳಿಸುವುದು.<br>2) ವಿಶೇಷ ದೈಹಿಕ ಕ್ಷಮತೆಯನ್ನು ಪಡೆಯಲು ರೂಢಿಸಿಕೊಳ್ಳಬೇಕಾದ ವಿಶೇಷ ವ್ಯಾಯಾಮಗಳನ್ನು ಬೋಧಿಸುವುದು.<br>3) ಈ ಮೇಲಾಟಗಳನ್ನು ಸಾಧನೆ ಮಾಡಿರುವಂತಹ ಸಾಧಕ ಕ್ರೀಡಾ ಪಟುಗಳ ಸಂಕ್ಷಿಪ್ತವಾದ ಮಾಹಿತಿ ನೀಡುವುದು. | ಸಾಧಕರ ಜೀವನ ಪರಿಚಯ ಪುಸ್ತಕಗಳನ್ನು ಬಳಸುವುದು.<br>ವಿಶೇಷ ವ್ಯಾಯಾಮಗಳ ಪಟ್ಟಿ ತಯಾರಿಸುವುದು.<br>ಕಪ್ಪು ಹಲಗೆ ಭೋದನೆ | 04 ಬ |
| 3 | <u>ಘಟಕ-3</u><br>ಏಕಾಗ್ರತೆ, ಮನ:ಶಾಂತಿ ದೇಹ ಮತ್ತು ಮನಸ್ಸಿನ ಒಗ್ಗೂಡಿಸುವಿಕೆ ಹಾಗೂ ಆರೋಗ್ಯವನ್ನು ವೃದ್ಧಿ ಪಡಿಸುವುದು | **ಯೋಗಾಸನ**<br>1) ಅಷ್ಟಾಂಗ ಯೋಗ.<br>2) ಪ್ರಾಣಾಯಾಮ.<br>3) ಧ್ಯಾನ.<br>4) ಸುಗುಣೋಪಾಸನೆ.<br>5) ನಿರ್ಗುಣೋಪಾಸನೆ.<br>(ಎ) ಈ ಮೇಲಿನ ಆಸನಗಳನ್ನು ಮಾಡುವ ಕ್ರಮದ ವಿವರಣೆ:<br>ಬಿ) ಸಂಕೀರ್ಣ ಸಮಾಜದಲ್ಲಿ ಇವುಗಳ ಅವಶ್ಯಕತೆ ವಿವರಣೆ.<br>ಸಿ) ಮೇಲಿನ ಪದಗಳ ಅರ್ಥ ಮತ್ತು ವ್ಯಾಪ್ತಿ ವಿವರಣೆ.<br>ಡಿ) ಮೇಲಿನ ಆಸನಗಳಿಂದ ಉಂಟಾಗುವ ದೈಹಿಕ ಮತ್ತು ಮಾನಸಿಕ ಲಾಭಗಳ ಪರಿಚಯ. | ಯೋಗಾಸನ ಪುಸ್ತಕಗಳ ಸಂಗ್ರಹಣೆ ಚಾರ್ಟ್‌ಗಳ ಬಳಕೆ.<br>ತಿಂಗಳಿಗೊಮ್ಮೆ ಯೋಗ ತಜ್ಞರಿಂದ ಶಿಬಿರಗಳ ಆಯೋಜನೆ<br>ವಿದ್ಯಾರ್ಥಿ ಟಿಪ್ಪಣಿಗಳ ಸಕಾಲಿಕ ಪರಿಶೀಲನೆ. | 29 |

| 1 | 2 | 3 | 4 | 5 |
|---|---|---|---|---|
| 4 | ಘಟಕ-4<br>1) ದೈಹಿಕ ಆರೋಗ್ಯದ ನಿರ್ದಿಷ್ಟ ವಿಚಾರಗಳ ಅಭಿವೃದ್ಧಿ.<br>2) ವೈಯುಕ್ತಿಕ ಸ್ವಚ್ಚತೆಯ ಅಭಿವೃದ್ಧಿ.<br>3) ಪ್ರಥಮ ಚಿಕಿತ್ಸಾ ಜ್ಞಾನವನ್ನು ನೀಡುವುದು. | **ಆರೋಗ್ಯ ಶಿಕ್ಷಣ, ವೈಯಕ್ತಿಕ ಸ್ವಚ್ಛತೆ., ಪ್ರಥಮ ಚಿಕಿತ್ಸೆ.**<br>1) **ಸಾಮಾಜಿಕ ಆರೋಗ್ಯ:-**<br>ಸಾಮಾಜಿಕ ಆರೋಗ್ಯದ ಪರಿಕಲ್ಪನೆ ಅಗತ್ಯವಾಗಿ ಅನುಸರಿಸಬೇಕಾದ ಸ್ವಚ್ಚತಾ ರೂಢಿಗಳನ್ನು ಪರಿಚಹಿಸುವುದು.<br>2) **ಕ್ರೀಡಾ ಪಟುವಿನ ಆಹಾರ ಕ್ರಮ**:-<br>ಎ) ಒಬ್ಬ ಉನ್ನತ ಕ್ರೀಡಾ ಪಟುವಿಗೆ ದಿನ ಒಂದಕ್ಕೆ ಬೇಕಾಗುವ ಆಹಾರದ ವಿಷಯವನ್ನು ಕ್ಯಾಲರಿ ಪ್ರಮಾಣದಲ್ಲಿ ತಿಳಿಸುವುದು.<br>ಬಿ) ಅ ಕ್ರೀಡಾ ಪಟುವು ಪಂಧ್ಯ ನಡೆಯುವ ಸಂದರ್ಭದಲ್ಲಿ ಸೇವಿಸಬೇಕಾದ ಆಹಾರದ ವಿವರಗಳು.<br>ಸಿ) ಪೂರ್ಣ ತರಬೇತಿಯ ಅವಧಿಯಲ್ಲಿ ತೆಗೆದುಕೊಳ್ಳ ಬೇಕಾದ ಆಹಾರದ ವಿವರ.<br>ಡಿ) ತರಬೇತಿ ಕಡಿಮೆ ಇರುವ ಅವಧಿಯಲ್ಲಿ ಅನುಸರಿಸಬೇಕಾದ ಆಹಾರ ಕ್ರಮ | ಚಾರ್ಟುಗಳ ಬಳಕೆ.<br><br><br><br><br>ಆಹಾರದ ಪ್ರಮಾಣವನ್ನು ಅಳೆಯುವ ವಿಧಾನದ ಬಳಕೆ.<br><br><br>ಉತ್ತಮ ಕ್ರೀಡಾ ಪಟುವಿನ ಸಂದರ್ಶನ | 20 |
| | ಹಸಿತರಕಾರಿಗಳ ಬಳಕೆಯನ್ನು ಪೇರೇಪಿಸುವುದು.<br><br><br><br><br><br>ಪ್ರಥಮ ಚಿಕಿತ್ಸೆ ಮಾಹಿತಿಯಿಂದ ಅಪಾಯ ಗಳನ್ನು ತಪ್ಪಿಸುವ ಸ್ವಂತಸ್ತಿಕೆಯನ್ನು ವಿದ್ಯಾರ್ಥಿ ಗಳಲ್ಲಿ ಬಳಸುವುದು | **ಹಲವು ಹಸಿ ತರಕಾರಿಗಳ ಬಳಕೆ ಮತ್ತು ಪ್ರಯೋಜನಗಳು:**<br>ಹಸಿ ತರಕಾರಿಗಳನ್ನು ನೇರವಾಗಿ ಉಪಯೋಗಿಸುವುದರಿಂದ ಲಭ್ಯವಾಗುವ ವಿಶೇಷ ಆರೋಗ್ಯ ಅಂಶಗಳನ್ನು ವಿವರಿಸಿವುದು.<br>ಹಸಿ ತರಕಾರಿಗಳಲ್ಲಿ ಪೋಷಕಾಂಶಗಳು ನಾಶವಾಗದೇ ಇರುವ ಬಗ್ಗೆ ಮಾಹಿತಿ ನೀಡುವುದು.<br>**ಪ್ರಥಮ ಚಿಕಿತ್ಸೆ**<br>ಎ) ಹಾವು ಕಚ್ಚಿದವರಿಗೆ.<br>ಬಿ) ನೀರಿನಲ್ಲಿ ಮುಳುಗಿದವರಿಗೆ.<br>ಸಿ) ಪ್ರಾಣಿಗಳ ಕಡಿತಕ್ಕೆ ಒಳಗಾದವರಿಗೆ<br>ನೀಡಬೇಕಾದ ಪ್ರಥಮ ಚಿಕಿತ್ಸೆಯ ಮಾಹಿತಿಯನ್ನು ವಿವರಿಸುವುದು.<br>ಎ) ವಿವಿಧ ಸಂದರ್ಭಗಳಲ್ಲಿ ಬಳಸುವ ಪಟ್ಟಿಗಳ ವಿಧಾನವನ್ನು ಭೋದಿಸುವುದು.<br>ಬಿ) ಪ್ರಥಮ ಚಿಕಿತ್ಸೆಯ ಸುವರ್ಣ ನಿಯಮಗಳನ್ನು ಪರಿಚಯಿಸುವುದು. | ಮನೆಗಳಲ್ಲಿ ಪ್ರಾಯೋಗಿಕವಾಗಿ ಹಸಿ ತರಕಾರಿಗಳನ್ನು ಉಪಯೋಗಿಸುವಂತೆ ಪ್ರೇರೇಪಿಸುವುದು.<br><br><br>ಚಾರ್ಟುಗಳ ಬಳಕೆ.<br>ಅಣಕು ಪ್ರದರ್ಶನ | |
| 5 | ಘಟಕ-05.<br>ರಾಷ್ಟ್ರೀಯ ಭಾವಣೆಗಳನ್ನು ಜಾಗೃತಿ ಗೊಳಿಸುವುದು ಮತ್ತು ಧರ್ಮ ಸಹಿಷ್ಣತೆಯನ್ನು ಅಭಿವೃದ್ಧಿ ಪಡಿಸುವುದು. | **ರಾಷ್ಟ್ರೀಯ ಭಾವೈಕ್ಯತೆ**<br>ರಾಷ್ಟ್ರಧ್ವಜ ನೀಡಿ ಸಂಹಿತೆ<br>ರಾಷ್ಟ್ರಧ್ವಜ, ಅಳತೆ, ಹಾರಿಸುವ ವಿಧಾನ ರಕ್ಷಿಸುವ ವಿಧಾನ ಉಪಯೋಗಿಸುವ ವಿಧಾನಗಳನ್ನು ಭೋದಿಸುವುದು.<br>**ಕೋಮುಸೌಹಾರ್ಧತೆ**<br>ಅನೇಕತೆಯಲ್ಲಿ ಏಕತೆಯನ್ನು ಹೊಂದಿರುವ ನಮ್ಮ ಭಾರತ ದೇಶದಲ್ಲಿ ಕೋಮು ಸೌಹಾರ್ಧದ ಮತ್ತು ಸೌಮರಸ್ಯದ ಇಂದಿನ ತುರ್ತು ಅಗತ್ಯ ಮತ್ತು ಅವಶ್ಯಕತೆಗಳನ್ನು ವಿದ್ಯಾರ್ಥಿಗಳಿಗೆ ಮನನ ಮಾಡಿಸುವುದು. | ಉಪಯೋಗಿಸುವ ವಿಧಾನವನ್ನು ಪ್ರದರ್ಶಿಸುವುದು<br><br><br>ಕಿರಿನಾಟಕ ಮತ್ತು ಸಂಬಂಧಿತ ಸನ್ನಿವೇಶಗಳನ್ನು ತರಗತಿಗಳಲ್ಲಿ ರೂಪಿಸಿ ಪ್ರದರ್ಶಿಸುವುದು.<br>ದಿನಪತ್ರಿಕೆಗಳನ್ನು ಪ್ರಕವಾಗುವ ಕೋಮುಗಲಭೆಯಿಂದ ಉಂಟಾಗುವ ದುಷ್ಪರಿನಾಮಗಳನ್ನು ತಿಳಿಸುವುದು. | |

ತರಗತಿ - 9. ಪ್ರಾಯೋಗಿಕ

| ಕ್ರ.ಸಂ | ಸಾಮರ್ಥ್ಯ/ ಉಪಸಾಮರ್ಥ್ಯಗಳು | ವಿಷಯ ಮತ್ತು ಚಟುವಟಿಕೆಗಳು | ಮಾರ್ಗೋಪಾಯಗಳು | ಅವಧಿ |
|---|---|---|---|---|
| 1 | 2 | 3 | 4 | 5 |
| | 1. ಉತ್ತಮ ದೈಹಿಕ ಬೆಳವಣಿಗೆ.<br>2. ದೇಹ ಮತ್ತು ಮನಸ್ಸಿನಲಯ ಬದ್ಧತೆ.<br>3.ಏಕಾಗ್ರತೆ ಮೂಡಿಸುವುದು.<br><br>1. ಮೆದುಳು ಮತ್ತು ಮಾಂಸ ಖಂಡಗಳ ಹೊಂದಾಣಿಕೆ.<br>2.ನಿರ್ಣಯತೆಗೆದುಕೊಳ್ಳುವ ಸಾಮರ್ಥ್ಯಭಿವೃದ್ದಿ.<br>3. ದೈಹಿಕ ಶಕ್ತಿ ವೃದ್ದಿಸುವುದು. | **ಅ-ಬಾಸ್ಕಟ್ ಬಾಲ್**<br>ಸ್ಟ್ಯಾಂನ್ಸ್-ಬಾಲ್ ಹೋಲ್ಡಿಂಗ್ ಮತ್ತು ಬೇಸಿಕ್ ನಿಯಮ.<br>ಡ್ರಿಬ್ಲಂಗ್-ಲೋ.ಮೀಡಿಯಂ-ಹೈ-ಪ್ರೋಗ್ರೆಸ್ಸಿಂಗ್ ವಿರ್ಥದ ಬಾಲ್,ಪಾಸಿಂಗ್ ಮತ್ತು ರಿಸೀವಿಂಗ್, ಚೆಸ್ಟ್ ಪಾಸ್-ಹೋವರ್‌ಹೆಡ್ ಪಾಸ್-ಬೌನ್ಸ್‌ಪಾಸ್, ಸ್ಟಾಪಿಂಗ್, ಟುಕೌಂಟ್(ಸ್ಕೈಪ್) ಸ್ಟಾಪ್-ಜಂಪ್, ಸ್ಟಾಪ್, ಪಿಒಟಿಂಗ್, ಶೂಟಿಂಗ್-ಸೆಟ್-ಶಾಬ್-ಸಿಂಗ್ಲ ಹ್ಯಾಂಡ್ ಮತ್ತು ಟೂ ಹ್ಯಾಂಡೆಂಡ್-ಲೇ ಆಪ್ ಖಾಟ್.<br>**ಇ. ಹ್ಯಾಂಡ್ ಬಾಲ್**<br>1) ಗೋಲ್ ಕೀಪರ್ ಥ್ರೊ.<br>2) ಬ್ಲಾಕಿಂಗ್.<br>3) ರಿಸೀವಿಂಗ್ ವಿಕ್ ವೇರಿಏಷನ್ಸ್-ಹಾಪ್ ಲೋ, ಕ್ಯಾಚಿಂಗ್ ವಿತ್ ಒನ್ ಹ್ಯಾಂಡ್.<br>4) ಡಿಪೆನ್ಸೆವ್ ಸ್ಟ್ಯಾಂನ್ಸ್.<br>5) ಡ್ರಾಡ್ಜಿಂಗ್ ರೈಟ್ ಅಂಡ್ ಲೆಫ್ಟ್.<br>6) ಸ್ಟಾಪಿಂಗ್ ದ ಬಾಲ್.<br>7) ಡೆಪೆನ್ಸು ಡಿಸ್ಟಮ್, 6-0, 5-1, 4-2, 3-3.<br>ಅಪೆನ್ಸಿ ಸಿಸ್ಟಮ್- 1-5,2-4, 3-3.9) ಗೋಲ್ ಕೀಪಿಂಗ್. | ನಮೂದಿಸಿರುವ ಕೌಶ್ಯಕ್‌ಗಳನ್ನು ಮಾಡಿ ತೋರಿಸಿ, ಪ್ರತಿಯೊಬ್ಬ ವಿದ್ಯಾರ್ಥಿಯಿಂದ ಆಭ್ಯಾಸ ಮಾಡಿಸುವುದು.<br><br>ಮೇಲೆ ತಿಳಿಸಿರುವಂತೆ.<br><br>ಪ್ರದರ್ಶನ ಪದ್ದತಿ ಮತ್ತು ಆಭ್ಯಾಸದ ಮೂಲಕ ಕೌಶಲ್ಯಗಳನ್ನು ರೂಡಿಸುವುದು. | 8 ಅವಧಿ |
| | 1.ದೈಹಿಕ ಚಲನೆಯಲ್ಲಿ.<br>2.ಸರಳತೆಯನ್ನು ಅಭಿವೃದ್ದಿ ಪಡಿಸುವುದು.<br>3.ಏಕಾಗ್ರತೆ ಮೂಡಿಸುವುದು.<br>4. ದೈಹ ಮತ್ತು ಮನಸ್ಸಿನ ಲಯಬದ್ದತೆ | **ಈ- ಬ್ಯಾಡ್ಮಿಂಟನ್.**<br>1) ಡಾಜಿಂಗ್.<br>2) ಸ್ಮ್ಯಾಶಿಂಗ್.(ಅ) ಸ್ಟನ್ ಸ್ಮ್ಯಾಶಿಂಗ್(ಆ) ಡೈರೆಕ್ಟ್ ಸ್ಮ್ಯಾಶಿಂಗ್<br>3) ಪ್ಲೇಸ್ಮೆಂಟ್.<br>4) ಪೂರಕ ಆಟಗಳು.<br>5) ಪೂರಕ ವ್ಯಾಯಾಮಗಳು.<br>6) ತಂತ್ರಗಳು. | ನಮೂದಿಸಿರುವ ಕೌಶಲ್ಯಗಳನ್ನು ಮಾಡಿ ತೋರಿಸಿ ಪ್ರತಿಯೊಬ್ಬ ವಿದ್ಯಾರ್ಥಿಯಿಂದ ಆಭ್ಯಾಸ ಮಾಡಿಸುವುದು. | |

| 1 | 2 | 3 | 4 | 5 |
|---|---|---|---|---|
| | 1.ಕಣ್ಣು ಕೈ ಕಾಲುಗಳ ಸ್ನಾಯುಗಳ ಹೊಂದಾಣಿಕೆ ವರ್ಧಿಸುವುದು.<br>2.ವಿದ್ಯಾರ್ಥಿಯ ವೇಗ ವರ್ಧನೆ. | **ಉ - ಹಾಕಿ ಕೌಶಲ್ಯಗಳು**<br>1. ಪೆನಾಲ್ಟಿ ಕಾರ್ನ್ರ್.<br>2. ಪೆನಾಲ್ಟಿ ಸ್ಟ್ರೋಕ್.<br>3. ಪೆನಾಲ್ಟಿ-ಸ್ಟ್ರೋಕ್ ಸಮಯದಲ್ಲಿ ತಂಡದ ಡೆಪೆನ್ಸ<br>4. ಪೆನಾಲ್ಟಿ ಸಮಯದಲ್ಲಿ ತಂಡದ ಆಫೆನ್ಸ್<br>5. ಫೊಜಿಷನಲ್ ಪ್ಲೆ. | ನಮೂದಿಸಿರುವ ಕೌಶಲ್ಯಗಳನ್ನು ಮಾಡಿ ತೋರಿಸಿ ಪ್ರತಿಯೊಬ್ಬ ವಿದ್ಯಾರ್ಥಿಯಿಂದ ಆಭ್ಯಾಸ ಮಾಡಿಸುವುದು. | 6<br>ಅವಧಿ |
| | 1.ಸ್ಪರ್ಧಾಮನೋಭಾವನೆಯನ್ನು ಅಭಿವೃದ್ಧಿ ಪಡಿಸುವುದು.<br>2. ದೈಹಿಕ ಮತ್ತು ಮಾನಸಿಕ ಒತ್ತಡಗಳನ್ನು ನಿಬಾಯಿಸುವ ಸಾಮರ್ಥ್ಯಗಳಿಸುವುದು. | **ಘಟ-2- ಮೇಲಾಟಗಳು.**<br>**ಎ) ಮಿಡಲ್ ಡಿಸ್ಟೆನ್ಸ್ ರನ್ನಿಂಗ್.**<br>1) ಟ್ಯಾಕ್ಟಿಕಲ್ ಹಾಸ್ಟೆಂಟ್ ಪಾರ್ ಮಿಡಲ್ ಡಿಸ್ಟೆಂನ್ಸ್ ರನ್ನಿಂಗ್.<br>**ಬಿ) ಜಾವಲಿನ್.**<br>1) ಸ್ಪೆಸಿಪಿಕ್ ಕಂಡೀಷನಿಂಗ್ ಎಕ್ಸಸೈಜಸ್ ಪಾರ್ ಜಾವಲನ್<br>2) ದಿ ಗ್ರಿಪ್-ಮಿಡಲ್ ಪಿಂಗರ್ ಗ್ರಿಪ್ , ಹುಕ್ ಗ್ರಿಪ್.<br>3) ಕ್ಯಾರಿ ಮೀಡಿಯಂ-ಹೈ.<br>4) 5- ಸ್ಟ್ರೈಡ್ ಪ್ಯಾಟರನ್. | ಪ್ರಾಯೋಗಿಕ ಪ್ರದರ್ಶನ ನೀಡುವುದು<br>ನುರಿತ ಅಥ್ಲೀಟ್ಸ್‌ಗಳಿಂದ ತರಬೇತಿ ನೀಡುವುದು.<br>ಪುನರಭ್ಯಾಸಗಳನ್ನು ಪರಿಶೀಲಿಸುವುದು. | 02<br>02<br>01<br>01<br>02 |

**ಪ್ರಾಯೋಗಿಕ.** **ತರಗತಿ - 9. - ದೈಹಿಕ ಶಿಕ್ಷಣ ಪಠ್ಯಕ್ರಮ**

| ಕ್ರ.ಸಂ | ಸಾಮರ್ಥ್ಯ/ ಉಪಸಾಮರ್ಥ್ಯಗಳು | ವಿಷಯ ಮತ್ತು ಚಟುವಟಿಕೆಗಳು | ಮಾರ್ಗೋಪಾಯಗಳು | ಅವಧಿ |
|---|---|---|---|---|
| 1 | 2 | 3 | 4 | 5 |
| | 1.ಉಸಿರಾಟದ ತೊಂದರೆಯನ್ನು ನಿವಾರಿಸಿ ತಮ್ಮ ಆಯಸ್ಸನ್ನು ವೃದ್ದಿಗೊಳಿಸುವುದಲ್ಲಿ ಸಹಾಯಕವಾಗಿದೆ.<br>2. ಏಕಾಗ್ರತೆ ಹೆಚ್ಚಿಸುವುದು.<br>3. ಮನಸ್ಸನ್ನು ಶಾಂತಿ ಗೊಳಿಸುವುದು | **ಪ್ರಾಣಾಯಾಮಗಳು:-**<br>1) ಚಂದ್ರ ಭೇದ ಪ್ರಾಣಾಯಮ.<br>2) ಸೂರ್ಯ ಭೇದ ಪ್ರಾಣಾಯಾಮ.<br>3) ನಾಡೀ ಶುದ್ದಿ ಕ್ರಿಯೆ.<br>4) ಉಜ್ಜಾಯಿ ಪ್ರಾಣಾಯಾಮ.<br>5) ಧ್ಯಾನ- ಸುಗುಣೋಪಾಸನೆ-ನಿರ್ಗುಣೋಪಾಸನೆ. | ಶಿಕ್ಷಕರು ಮೊದಲಿಗೆ ದೀರ್ಘ ಉಚ್ಛಾಸ, ಮತ್ತು ನಿಶ್ವಾಸ ಊಸಿರಾಟವನ್ನು ಅಭ್ಯಾಸ ಮಾಡಿಸುತ್ತಾ ಪ್ರಾಣಾಯಾಮ ಕ್ರಿಯೆಗಳನ್ನು ಕಲಿಸುವುದು ಮತ್ತು ಪುನ:ರಾವರ್ತಿಸುವುದು. | 05 |

| 1 | 2 | 3 | 4 | 5 |
|---|---|---|---|---|
| | **ಘಟಕ - 5**<br>1.ಶಿಸ್ತಿನ ಸಿಪಾಯಿಗಳಾಗಿ ಮಾರ್ಪಾಡು ಮಾಡುವುದು.<br>2.ಗಾಂಭೀರ್ಯ ನಡಿಗೆ.<br>3.ಕಾಲುಗಳ ಮಾಂಸಖಂಡಗಳ ಸಡಿಲಿಕೆ, ಮತ್ತು ಬಲಗೊಳ್ಳುವಿಕೆ.<br>4. ಉತ್ತಮ ದೇಹ ದಾರ್ಢ್ಯತೆ ಹೊಂದುವುದು.<br>5. ತೋಳು ಬಲದ ಸ್ನಾಯುಗಳ ಸಡಿಲಿಕೆ ಮತ್ತು ಬಲಗೊಳ್ಳುವಿಕೆ<br>6. ವಯಕ್ತಿಕ ವರ್ಚಸ್ಸು ವೃದ್ದಿ ಗ ೊಳ್ಳುವುದು | **ಪದಕಾವಾಯಿತು:-**<br>1) ಥೋಟಾ ಕದಂ.<br>2) ಲಂಬಾ ಕದಂ.<br>3) ಕದಂ ಬದಲ್.<br>4) ಖುಲೆ ಲೈನ/ ನಿಕಟ್ , ಲೈನ್ ಚಲ್.<br>5) ಆಗೋ ಪೀಛೆ ಚಲ್.<br>6) ಲೈನೆ/ಬಾಯೇ ಗೂಮ್.<br>7) ಲೇನ್ ಲೇನ್ ಮೆ ತೇಜ ಚಲೆ.<br>8) ದೈನೆ / ಬಾಯೇ ಸೆಲನಾಟ.<br>9) ಸಾಮನೆ ಸೆಲನಾಟ.<br>10) ಆಫೀಸರ್ ಕೋ ಪತ್ತದೇನಾ ಜೌರ್ ಇನಾಮೆ ಲೇನಾ.<br>11) ಅತಿಥಿಗಳಿಗೆ ವಂದನೆ ಸ್ವೀಕಾರ. | ಶಿಕ್ಷಕರು ಮೊದಲಿಗೆ ಪದಕವಾಯಿತು ಕೌಶಲ್ಯಗ ಳನ್ನು ಪ್ರದರ್ಶಿಸಿ ಪೂರಕವಾದ ಚಲನೆಯ ಬಗ್ಗೆ ತಿಳಿಸುತ್ತಾ ಆಭ್ಯಾಸ ಮಾಡಿಸುವುದು ಮತ್ತು ಪುನರಾವರ್ತಿಸುವುದು. | 10 |

**10ನೇ ತರಗತಿ**

**ವಾರಕ್ಕೆ 4 ಅವಧಿಯಂತೆ ತಿಂಗಳಿಗೆ 16 ರಂತೆ ವರ್ಷಕ್ಕೆ ಸ140 ಅವಧಿಗಳು ಇದರಲ್ಲಿ ತಾಂತ್ರಿಕ ಅವಧಿಗಳು:56, ಪ್ರಯೋಗಿಕ 84.**

| ಕ್ರ.ಸಂ | ವಿಷಯ | ತಾತ್ವಿಕ | ಪ್ರಾಯೋಗಿಕ | ಒಟ್ಟು |
|---|---|---|---|---|
| 1 | ದೈಹಿಕ ಶಿಕ್ಷಣ | 08 | - | 08 |
| 2 | ಮೇಲಾಟಗಳು | 08 | 20 | 28 |
| 3 | ಪ್ರಮುಖ ಆಟಗಳು | 06 | 14 | 18 |
| 4 | ಆರೋಗ್ಯ ಶಿಕ್ಷಣಟ | 10 | - | 10 |
| 5 | ರಾಷ್ಟ್ರೀಯ ಭಾವೈಕ್ಯತೆ | 08 | 15 | 23 |
| 6 | ಯೋಗಾಸನ | 05 | 18 | 23 |
| 7 | ಸಾಮೂಹಿಕ ವ್ಯಾಯಾಮ | - | 08 | 08 |
| 8 | ಕ್ರೀಡೆಗಳು | 06 | - | 06 |
| 9 | 8 ಸಮತ್ತು 9ನೇ ಪುನರಾವರ್ತನೆ | 05 | 04 | 09 |
| 10 | ಇತರೆ | - | 05 | 05 |
| | **ಒಟ್ಟು** | **56** | **84** | **140** |

| ಸಾಮರ್ಥ್ಯ | ವಿಷಯ(ಚಟುವಟಿಕೆ) | ಮಾರ್ಗೋಪಾಯಗಳು | ತಾತ್ವಿಕ | ಪ್ರಾಯೋಗಿಕ |
|---|---|---|---|---|
| ಉತ್ತಮ, ಸಮಕ್ಷಮತೆ, ಸಮಯ ಪ್ರಜ್ಞೆ, ಹಾಗೂ ಸ್ವಸ್ಥ ಮನೋಭಾವ | III. ಪ್ರಮುಖ ಆಟಗಳು(ಪ್ರಾಯೋಗಿಕ)<br>(1) ಕ್ರಿಕೆಟ್ ನಲ್ಲಿ ಫೀಲ್ಡಿಂಗ್ ಮತ್ತು ಕ್ರಕೆಟಿನ ಪೂರಕ ಚಟುವಟಿಕೆಗಳು<br>(2) ಆಟಗಳ ಅಭ್ಯಾಸ<br>(3) ಪ್ರಮುಖ ಆಟಗಳು (ತಾತ್ವಿಕ)<br>(1) ಕ್ರಿಕೆಟ್ (2) ಈಜು ಮತ್ತು ಡೈವಿಂಗ್ ಸ್ಪರ್ಧೆಗಳು | ಫೀಲ್ಡಿಂಗ್ ಕೌಶಲ್ಯಗಳನ್ನು ಕಲಿಸುವುದು. | -<br>06 | 14 |
| ಸಹನೆ, ತಾಳ್ಮೆ, ಶಾಂತಿ ಹಾಗೂ ಏಕಾಗ್ರತೆಯನ್ನು ವಿದ್ಯಾರ್ಥಿಗಳಲ್ಲಿ ಬೆಳೆಸಬಹುದು. | IV.ಯೋಗಾಸನ:(ಪ್ರಾಯೋಗಿಕ)<br>ಯೋಗ ಸ್ಪರ್ಧೆಗಳು ಹಾಗೂ ನಿಯಮಗಳ ಅಭ್ಯಾಸ<br>.ಯೋಗಾಸನ | ಸ್ಪರ್ಧೆಯಲ್ಲಿ ಆಸನಗಳಿಗೆ ನೀಡುವ ಅಂಕಗಳ ವಿಧಾನ ಮತ್ತು ಪಾಲಿಸುವ ಕ್ರಮಗಳನ್ನು ಕಳಿಸುವುದು. | 05 | 18 |

**10ನೇ ತರಗತಿ ದೈಹಿಕ ಶಿಕ್ಷಣ ಪಠ್ಯಕ್ರಮ**

| ಸಾಮರ್ಥ್ಯ | ವಿಷಯ(ಚಟುವಟಿಕೆ) | ಮಾರ್ಗೋಪಾಯಗಳು | ತಾತ್ವಿಕ | ಪ್ರಾಯೋಗಿಕ |
|---|---|---|---|---|
| ಉತ್ತಮ ಆರೋಗ್ಯ, ದೈಹಿಕ ಬೆಳವಣಿಗೆ, ಹಾಗೂ ಆರೋಗ್ಯವಂತ ಮನಸ್ಸು, ಇವೆಲ್ಲ ಅಭಿವೃದ್ಧಿ<br>ಗೊಳ್ಳವುದು | I. ಸಾಮೂಹಿಕ ವ್ಯಾಯಾಮ:<br>(1) ಸಾಮೂಹಿಕ ಕವಾಯಿತುಗಳು - ಸಂಗೀತಗಳು<br>(2) ಏರೋಬಿಕ್ಸ್ ಕವಾಯಿತುಗಳು | ನವೀನ ಮಾದರಿಯ ದೈಹಿಕ ಚಟುವಟಿಕೆಗಳನ್ನು ಸಂಗೀತದ ಮೂಲಕ ಅಭ್ಯಸಿಸುವುದು | - | 08 |
| ದೇಹದಲ್ಲಿ ಚುರುಕುತನ,<br>ನರಗಳು ಹಾಗೂ ಸ್ನಾಯುಗಳ ವಿಕಾಸ | II. ಮೇಲಾಟಗಳು(ಪ್ರಾಯೋಗಿಕ}<br>(1) ಏಕಾಗ್ರಗತೆ ಮೂಡಿಸಲು ಚಟುವಟಿಕೆ ಗಳು<br>(2) ಮನೋಸ್ಥೈರ್ಯ ಬೆಳೆಸಲು ಚಟುವಟಿಕೆ ಗಳು<br>(3) ಮೇಲಾಟದ ಪೂರಕ ಆಟಗಳು<br>(4) ಮೇಲಾಟದ ಅಭ್ಯಾಸ<br>(ತಾತ್ವಿಕ)<br>(5)ಮ್ಯಾರಾಥಾನ್ ಓಟದ ಇತಿಹಾಸ<br>(6)ಹರ್ಡಲ್ಸ್<br>(7)ಸ್ಟೀಪಲ್ ಬೇಸ್<br>(8) ಪೋಲ್ ವಾಲ್ಟ್ | ಅಂತರಾಷ್ಟ್ರೀಯ ಓಟಗಾರ್ತಿ ಯರ ಚಿತ್ರಗಳನ್ನು ಪರಿಚಯಿಸುವುದು<br>ಐತ್ರಗಳ ಮೂಲಕ ಮಕ್ಕಳಿಗೆ ಪರಿಚಯ ಮಾಡಿಕೊಡುವುದು | 08 | 20 |

| ಸಾಮರ್ಥ್ಯ | ವಿಷಯ(ಚಟುವಟಿಕೆ) | ಮಾರ್ಗೋಪಾಯಗಳು | ತಾತ್ವಿಕ | ಪ್ರಾಯೋಗಿಕ |
|---|---|---|---|---|
| ಅಧ್ಯಯನ ಮಾಡಿರುವ ವಿಷಯಗಳನ್ನು ಪುನರ್ ವಿಮರ್ಶೆ ಮಾಡಿ ಮಕ್ಕಳಲ್ಲಿ ಸಾಮರ್ಥ್ಯ ಹೆಚ್ಚಿಸುವುದು | **<u>ಸೇತುಬಂಧ:</u>**<br>(1)ಹಿಂದಿನ ತರಗತಿಯಲ್ಲಿ ಅಂದರೆ 9ನೇ ತರಗತಿಯಲ್ಲಿ ಕಲಿಸಿದ ಕೌಶಲ್ಯ ಹಾಗೂ ಪಂದ್ಯಾಟಗಳನ್ನು ಪುನರಾವರ್ತಿಸುವುದು ಮತ್ತು ವಿದ್ಯಾರ್ಥಿಗಳಲ್ಲಿ ಚಟುವಟಿಕೆಗಳನ್ನು ಪುನರ್ ವಿಮರ್ಶಿಸುವುದು.<br>(2)ರಸ್ತೆ ಸುರಕ್ಷತಾ ಚಟುವಟಿಕೆಗಳ ಸಂಜ್ಞೆಗಳನ್ನು ಅಭ್ಯಾಸಿಸುವುದು.<br>(3) ಅಪಘಾತಕ್ಕೊಳಗಾದ ವ್ಯಕ್ತಿಯ ಶುಶ್ರೂಷೆ ಅಭಿನಯದ ಮೂಲಕ ಅಧ್ಯಯನ. | ಸಂರಕ್ಷತಾ ಚಿನ್ಹೆಗಳನ್ನು ಪರಿಚಯಿಸುವುದು. | 05 | 04 |
| | **<u>ದೈಹಿಕ ಶಿಕ್ಷಣ</u>**<br>(1) ಸಾಮಾನ್ಯ ಜೀವನದಲ್ಲಿ ದೈಹಿಕ ಶಿಕ್ಷಣ ಮತ್ತು ಪ್ರಯೋಜನಗಳು<br>(2) ದೈಹಿಕ ಶಿಕ್ಷಣದ ಚಾರಿತ್ರಿಕ ಘಟನೆಗಳು<br>(3) ಭಾರತ ದೇಶದಲ್ಲಿ ದೈಹಿಕ ಶಿಕ್ಷಣದ ಬೆಳವಣಿಗೆ. | | 08 | |

| | | | | |
|---|---|---|---|---|
| | **<u>ಘಟಕ-09</u>**<br>1. ಹಿಡಿಯುವುದು.<br>2.ಅಳತೆ, ಎಣಿಕೆ.<br>3.ಸಂಕಲನ, ವೀಕ್ಷಣೆ.<br>4.ಬಲ ಪ್ರಯೋಗ.<br>5.ನಿಯಮಪಾಲನೆ.<br>6.ನಾಯಕತ್ವ. | **<u>ಮನರಂಜನೆಯ ಆಟಗಳು</u>**<br>1) ಕೈಬಾಂಬ.<br>2) ವಜ್ರಮುಷ್ಠಿ.<br>3) ಪರಿಚಯ ತಿಳಿಸುವುದು.<br>4) ಹತ್ತು ಸಂಖ್ಯೆಯ ಆಟ.<br>5) ಹುಲಿ, ಕರಡಿ ಆಟ.<br>6) ಕಪ್ಪೆ ಆಟ. | ಶಿಕ್ಷಕರು ಮನರಂಜನೆಯ ಆಟಗಳ ಸಂಪೂರ್ಣ ಮಾಹಿತಿಯನ್ನು ನೀಡಿ ವಿದ್ಯಾರ್ಥಿಗಳಲ್ಲಿ ಆಸಕ್ತಿಯನ್ನು ಮೂಡಿಸಿ , ಆಟಗಳಲ್ಲಿ ಭಾಗವಹಿಸುವಂತೆ ಮಾಡುವುದು. | 07 |

| 1 | 2 | 3 | 4 | 5 |
|---|---|---|---|---|
| | 7. ಸ್ಪರ್ಧಾ ಮನೋಭಾವ.<br>8. ಆನಂದ, ಆಸಕ್ತಿ.<br>9. ಅಂಗಾಂಗಳಿಗೆ ವ್ಯಾಯಾಮ. | 7) ಬಟಾಟೆ ಆಟ.<br>8) ಉಪದೇಶ ಸಾಗಿಸು.<br>9) ಆನೆ ಕಾಳಗ.<br>10) ಹಾವು, ಮುಂಗುಸಿ. (11)ಕಾಂಗ್ರೋ ರಿಲೆ.<br>12) ಚಲಿಸದ ವಿಗಹ | | |
| | **ಘಟಕ-10**<br>1. ಗ್ರಹಿಸುವ ಶಕ್ತಿಯನ್ನು ಹೆಚ್ಚಿಸುವುದು. | **ರಾಷ್ಟ್ರೀಯ ಭಾವೈಕ್ಯತೆಯ ಗೀತೆಗಳು:**<br>1) ''ಪುಣ್ಯ ಭಾರತ''.<br>2) ''ಸಾರೇ ಜಹಾಂಸೇ ಅಚ್ಛಾ''. | ಶಿಕ್ಷಕರು ಮೊದಲು ಲಯಬದ್ಧವಾಗಿ ಹೇಳಿ ಕೊಟ್ಟು ಅಭ್ಯಾಸ ಮಾಡಿಸುವುದು. | |

**ಪ್ರಶ್ನೆಪತ್ರಿಕೆ, ಅಂಕಗಳು ಹಾಗೂ ಮೌಲ್ಯಮಾಪನ**

- 1 ರಿಂದ 4ನೇ ತರಗತಿಗಳಿಗೆ ನಿರಂತರ ಮೌಲ್ಯಮಾಪನ, ಸಾಮರ್ಥ್ಯಗಳನ್ನು ಗಳಿಸಿರುವ ಬಗ್ಗೆ.
- 5ನೇ ತರಗತಿಗೆ-ಇತರೆ ವಿಷಯಗಳಂತೆಯೇ ಮೌಲ್ಯಮಾಪನ ಮಾಡಿ ಅಂಕದಾನ ಮಾಡಿ ಗ್ರೇಡ್(ಶ್ರೇಣಿ) ನೀಡುವುದು.
- 6 ರಿಂದ 9ನೇ ತರಗತಿಗೆ ದೈಹಿಕ ಶೀಕ್ಷಣ, ಆರೋಗ್ಯ ಶಿಕ್ಷಣ ಮತ್ತು ಯೋಗ ಶಿಕ್ಷಣಕ್ಕೆ ಪ್ರಶ್ನೆಪತ್ರಿಕೆ, ಅಂಕಗಳು ಹಾಗೂ ಮೌಲ್ಯಮಾಪನವನ್ನು ಇತರೆ ವಿಷಯಗಳಿಗೆ ನೀಡಿರುವಂತೆ ಅದೇ ಮಾದರಿಯಲ್ಲಿ ತಾತ್ವಿಕ ಹಾಗೂ ಪ್ರಾಯೋಗಿಕ ವಿಭಾಗಗಳಿಗೆ 40:60 ರಂತೆ ಹಂಚಿಕೆ ಮಾಡಬೇಕಾಗುತ್ತದೆ.
- 10ನೇ ತರಗತಿಗೆ ಒಂದನೇ ಸೆಮಿಸ್ಟಾರ್‌ನವರೆಗೂ ಇದೇ ಮಾದರಿ ಅನುಸರಿಸಬೇಕಾಗುತ್ತದೆ.

ಎಂ.ಎನ್. ಸೋಮಶೇಖರ್
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ

ಪಿ.ಆರ್. 1508

ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಎ.ಆರ್. ಫಣೀಂದ್ರ ಕುಮಾರ್, ಸಹಾಯಕ ಅಭಿಯಂತರರು, ರೇಷ್ಮೆ ಇಲಾಖೆ, ಇವರ ವಿರುದ್ದ ದಾಖಲಾದ ಟ್ರಾಪ್ ಪ್ರಕರಣ – ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ**
1) ಕರ್ನಾಟಕ ಲೋಕಾಯುಕ್ತರವರ ಪತ್ರ ಸಂಖ್ಯೆ: ಲೋಕ್ / ತನಿಖೆ (ಸಾ)/ಬಿಡಿ–21/ಸಿಆರ್–7/2001/ಬಿಎಲ್ಆರ್, ದಿನಾಂಕ:25–08–2001.
2) ಸರ್ಕಾರಿ ಆದೇಶ ಸಂಖ್ಯೆ: ವಾಕೈ 342 ರೇಸೇವಿ 2001 ದಿನಾಂಕ:12–11–2001.
3) ಕರ್ನಾಟಕ ಲೋಕಾಯುಕ್ತರವರ ಪತ್ರ ಸಂಖ್ಯೆ:ಲೋಅ/ತನಿಖೆ/ಪೋ.ವಿ/ ಬಿಡಿ–21/ಪ್ರಸಂ–7/01/ ಬಿಎಲ್ಅರ್, ದಿನಾಂಕ:20–11–2001.
4) ಸರ್ಕಾರಿ ಆದೇಶ ಸಂಖ್ಯೆ;ವಾಕೈ 342 ರೇಸೇವಿ 2001 ದಿನಾಂಕ:02–01–2002
5) ಸರ್ಕಾರಿ ಆದೇಶ ಸಂಖ್ಯೆ ; ವಾಕೈ 342 ರೇಸೇವಿ 2001 ದಿನಾಂಕ: 28–02–2002.
6) ಕರ್ನಾಟಕ ಲೋಕಾಯುಕ್ತರವರ ಪತ್ರ ಸಂಖ್ಯೆ: ಲೋಕ್/ಐಎನ್ವಿ (ಜಿ)/ಬಿಡಿ–21/ಸಿಆರ್–7/01/ಬಿಎಲ್ಆರ್ ದಿನಾಂಕ:29–03–2005

**ಪ್ರಸ್ತಾವನೆ:**

ಶ್ರೀ ಎ.ಆರ್.ಫಣೀಂದ್ರ ಕುಮಾರ್, ಸಹಾಯಕ ಅಭಿಯಂತರರು, ರೇಷ್ಮೆ ಇಲಾಖೆ, ಇವರು ದಿನಾಂಕ:11–7–2001 ರಲ್ಲಿ ಶ್ರೀ ಬಸಪ್ಪ, ಹುತ್ತನ ಹಳ್ಳಿ ನಿವಾಸಿ, ಚಿಕ್ಕಜಾಲ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು, ಇವರು ಚಿಂತಾಮಣಿ ರೇಷ್ಮೆ ಗೂಡು ಮಾರುಕಟ್ಟೆಯಲ್ಲಿ ನಿರ್ವಹಿಸಿದ್ದ ಗುತ್ತಿಗೆ ಕೆಲಸದ ಮೊತ್ತ ರೂ.2,40,000–00ನ್ನು ಮಂಜೂರು ಮಾಡಲು ಹಾಗೂ ಯೂನಿಟ್ 1 ಮತ್ತು 2ರ ದುರಸ್ಥಿ ಮತ್ತು ಪೇಯ್ಂಟಿಂಗ್ ಕೆಲಸದ ಆರ್ಡರನ್ನು ನೀಡಲು ರೂ.43,500–00ಗಳ ಅಕ್ರಮ ಸಂಭಾವನೆಯನ್ನು ಕೇಳಿ ದಿನಾಂಕ: 12–07–2001 ರಂದು ಬೆಂಗಳೂರಿನಲ್ಲಿ ರೂ.40,000–00ಗಳ ಲಂಚದ ಹಣವನ್ನು ಪಡೆಯುತ್ತಿದ್ದಾಗ ಲೋಕಾಯುಕ್ತರವರು ಬೀಸಿದ ಟ್ರಾಪ್ ಬಲೆಯಲ್ಲಿ ಮೊತ್ತದೊಂದಿಗೆ ಸಿಕ್ಕಿರುವರೆಂದು ಆಪಾದಿತರು ಲಂಚವನ್ನು ಕೇಳಿ ಪಡೆದಿರುವ ಅಂಶವು ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ ಈ ಬಗ್ಗೆ ಸುಗಮ ತನಿಖೆಗೆ ಹಾಗೂ ಅವರ ವಿರುದ್ಧ ಸಾಕ್ಷಿ ಪುರಾವೆ ನಾಶಗೊಳಿಸುವ ಸಾಧ್ಯತೆ ಇದ್ದುದರಿಂದ ಮೇಲೆ ಓದಲಾದ (1)ರ ಲೋಕಾಯುಕ್ತರವರ ಪತ್ರದನ್ವಯ, ಸದರಿ ಅಧಿಕಾರಿಯನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ:12–11–2001ರ ಸರ್ಕಾರಿ ಆದೇಶದನ್ವಯ ಅಮಾನತ್ತುಗೊಳಿಸಲಾಗಿದೆ.

2. ಶ್ರೀ ಎ.ಆರ್. ಫಣೀಂದ್ರ ಕುಮಾರ್, ಸಹಾಯಕ ಇಂಜಿನಿಯರ್ ರವರ ವಿರುದ್ದ ದಾಖಲಾದ ಪ್ರಕರಣವು ಭ್ರಷ್ಟಾಚಾರ ನಿರ್ಮೂಲನ ಕಾಯಿದೆ, 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಸದರಿ ಆಪಾದಿತ ಸರ್ಕಾರಿ ನೌಕರರು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಅರ್ಹರಾಗಿರುತ್ತಾರೆಂದು ಸದರಿ ಅಧಿಕಾರಿಯನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಯನ್ನು ಮೇಲೆ ಓದಲಾದ (4)ರ ಆದೇಶದಲ್ಲಿ ನೀಡಲಾಗಿದೆ. ಮೇಲೆ ಓದಲಾದ (5)ರ ಆದೇಶದಲ್ಲಿ ಸದರಿ ಅಧಿಕಾರಿಯನ್ನು ಅಮಾನತ್ತಿನಿಂದ ಬಿಡುಗಡೆ ಮಾಡಿ ನಂ:1, ಉಪ ವಿಭಾಗ, ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ರೇಷ್ಮೆ ಇಲಾಖೆ, ಬೆಂಗಳೂರು, ಇಲ್ಲಿಗೆ ನೇಮಕ ಮಾಡಲಾಗಿದೆ.

3. ಸದರಿ ಅಧಿಕಾರಿಯ ವಿರುದ್ದ ದಾಖಲಾದ ಪ್ರಕರಣ ಸಂಖ್ಯೆ:ಸಿಆರ್ 7/2001 ರಲ್ಲಿ ದೋಷಾರೋಪಣ ಪಟ್ಟಿಯನ್ನು ನ್ಯಾಯಾಲಯದಲ್ಲಿ ಸಲ್ಲಿಸಿದ್ದು, ಈ ಪ್ರಕರಣವು ದಿನಾಂಕ:27–6–2002 ರಿಂದ ಸಿ.ಸಿ.ಸಂಖ್ಯೆ:193/2002 ವಿಚಾರಣೆಯಲ್ಲಿದ್ದು ಈ ಬಗ್ಗೆ ಬೆಂಗಳೂರು ವಿಶೇಷ ವ್ಯವಹಾರ ಮತ್ತು ಸತ್ರ ನ್ಯಾಯಾಧೀಶರು ದಿನಾಂಕ:26–02–2005ರ ಆದೇಶದಲ್ಲಿ ಸದರಿ ಆರೋಪಿಯನ್ನು ತಪ್ಪಿತಸ್ಥರೆಂದು ಪರಿಗಣಿಸಿ ಲಂಚನಿರೋಧಕ ಕಾಯಿದೆ, 1988ರ ಕಲಂ 7ರ ಅಡಿಯಲ್ಲಿ ಅಪರಾಧ ಎಸಗಿರುವುದಕ್ಕೆ ಎರಡು ವರ್ಷ ಕಠಿಣ ಸಜೆ ಮತ್ತು 20,000–00 ರೂಗಳ ದಂಡವನ್ನು ವಿದಿಸಿರುತ್ತಾರೆಂದು ದಂಡ ಕಟ್ಟಲು ತಪ್ಪಿದಲ್ಲಿ ಆರು ತಿಂಗಳ ಕಠಿಣ ಸಜೆ ವಿದಿಸಿರುತ್ತಾರೆಂದು ಈ ಕಾರಣದಿಂದ ಆರೋಪಿಯು ಶಿಕ್ಷೆಗೆ ಒಳಗಾಗಿರುವುದರಿಂದ ಕ.ನಾ.ಸೇ (ಸಿ.ಸಿ.ಎ) ನಿಯಮಾವಳಿಗಳು, 1957ರ ನಿಯಮ 14 ಮತ್ತು 10(2)ರ ಪ್ರಕಾರ ಶ್ರೀ ಎ.ಆರ್. ಫಣೀಂದ್ರ ಕುಮಾರ್ ರವರನ್ನು ಸೇವೆಯಿಂದ

ಕೂಡಲೇ ವಜಾ ಮಾಡುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಲೋಕಾಯುಕ್ತರವರು ಮೇಲೆ ಓದಲಾದ (5)ರ ಪತ್ರದಲ್ಲಿ ಕೋರಿದ್ದಾರೆ.

4) ಬೆಂಗಳೂರು ವಿಶೇಷ ವ್ಯವಹಾರ ಮತ್ತು ಸತ್ರ ನ್ಯಾಯಾಧೀಶರು ನೀಡಿರುವ ದಿನಾಂಕ:26–2–2005ರ ಆದೇಶದ ಮೇಲೆ ಆರೋಪಿತ ಅಧಿಕಾರಿಯು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ:460/2005 ಸಲ್ಲಿಸಿದ್ದು ದಿನಾಂಕ: 21–3–2005ರ ಆದೇಶದಲ್ಲಿ ಕೆಳಕಂಡಂತೆ ತಿಳಿಸಿದೆ.

"Considering the sentence passed by the learned Special Judge and also the facts, I feel that it is a fit case to suspend the sentence until further orders subject to the appellant depositing the fine amount within four weeks, if not already deposited. The trial Court is directed to enlarge the

appellant on bail on execution of self bond for Rs.10, 000/- with one surety to the likesum to the satisfaction of the trial Court.''

5) ಕರ್ನಾಟಕ ಉಚ್ಚ ನ್ಯಾಯಾಲಯದ ಮೇಲ್ಕಂಡ ಆದೇಶದ ಹಿನ್ನೆಲೆಯಲ್ಲಿ ಶ್ರೀ ಎ.ಆರ್.ಫಣೀಂದ್ರಕುಮಾರ್, ಸಹಾಯಕ ಅಭಿಯಂತರರು, ಇವರು ಶಿಕ್ಷೆಗೆ ಒಳಗಾಗಿರುವುದರಿಂದ ಕ.ನಾ.ಸೇ (ಸಿ.ಸಿ.ಎ) ನಿಯಮಾವಳಿಗಳು, 1957ರ ನಿಯಮ, 14 ಮತ್ತು 10(2)ರ ಅನ್ವಯ ಸದರಿ ಅಧಿಕಾರಿಯನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ ಕಾನೂನು ಇಲಾಖೆಯ ಅಭಿಪ್ರಾಯ ಕೋರಲಾಗಿದ್ದು, ಸದರಿ ಅಭಿಪ್ರಾಯವು ಕೆಳಕಂಡಂತಿದೆ:

(a) ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ದ ಮೇಲ್ಮನವಿಯನ್ನು ಸಲ್ಲಿಸಿ ದಂಡನೆಯ ಆದೇಶದ ನಿಲಂಬನೆ ಬಗ್ಗೆ ಮಧ್ಯಂತರ ಆದೇಶವನ್ನು ಪಡೆದುಕೊಂಡಿದ್ದರೂ ಸಹ, ಸದರಿ ನೌಕರನ ವಿರುದ್ದ ನಿಯಮಾನುಸಾರ ಕ್ರಮ ಜರುಗಿಸುವುದನ್ನು ತಡೆ ಹಿಡಿಯಬೇಕಾದ ಅಗತ್ಯವಿಲ್ಲವೆಂದು ಘನ ಸರ್ವೋಚ್ಚ ನ್ಯಾಯಾಲಯವು (SUPREME COURT IN 2001 air scw 3339 K.C ASAREEB v/s CBI CHANDIGARH) ರಲ್ಲಿ ಹೇಳಿದ ಅಂಶಗಳಿಂದ ಸ್ಪಷ್ಟವಾಗುತ್ತದೆ.

(b) ಒಬ್ಬ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ದಂಡನೆಗೆ ಗುರಿಯಾದರೆ, ಆತನು ಸಲ್ಲಿಸಿರಬಹುದಾದ ಮೇಲ್ಮನವಿ ಇತ್ಯರ್ಥವಾಗುವವರೆಗೂ ಕಾಯಿದೆ ಸಂವಿಧಾನದ ಅನುಚ್ಛೇದ 311(2) ರಡಿಯಲ್ಲಿರುವ ಎರಡನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ನಾಗರೀಕ ಸೇವಾ (ವ.ನಿ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 14(1) ರನುಸಾರ ಶಿಸ್ತಿನ ಕ್ರಮ ಕೈಗೊಳ್ಳತಕ್ಕದ್ದು. ಇಲ್ಲವಾದಲ್ಲಿ ಕ್ರಿಮಿನಲ್ ನ್ಯಾಯಾಲಯದಲ್ಲಿ ತೀವ್ರ ಆರೋಪಕ್ಕಾಗಿ ದೋಷಸಿದ್ದಿಯಾಗಿ ದಂಡನೆಗೆ ಗುರಿಯಾದಂತಹ ವ್ಯಕ್ತಿಯು ಸೇವೆಯಲ್ಲಿ ಮುಂದುವರೆಯಲು ಅವಕಾಶ ಕಲ್ಪಿಸಿದಂತಾಗುತ್ತದೆ. ಆದ್ದರಿಂದ, ಮೇಲ್ಮನವಿ ಆದೇಶವು ಇತ್ಯರ್ಥವಾಗುವುದನ್ನು ಕಾಯಬೇಕಾದ ಅವಶ್ಯಕತೆ ಇರುವುದಿಲ್ಲ. ಆದರೆ ಒಂದು ವೇಳೆ ಆಪಾದಿತ ಸರ್ಕಾರಿ ನೌಕರನು ಮೇಲಿನ ನ್ಯಾಯಾಲಯದಲ್ಲಿ ಖುಲಾಸೆಯಾದರೆ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಪರಿಷ್ಕರಿಸಬಹುದು.

(c) ಕಾರಣ ಮೇಲೆ ಉಲ್ಲೇಖಿಸಿದ ಘನ ಸರ್ವೋಚ್ಚ ನ್ಯಾಯಾಲಯದ ತೀರ್ಪಿನನ್ವಯ ಹಾಗೂ ಸರ್ಕಾರದ ಸುತ್ತೋಲೆ ಸಂ: ಸಿಆಸುಇ 9 ಸೇಇವಿ 95, ದಿನಾಂಕ: 26-6-1996 ರಂತೆ ಓರ್ವ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ದಂಡನೆಗೆ ಗುರಿಯಾದರೆ, ಆತನು ಸಲ್ಲಿಸಿದ ಮೇಲ್ಮನವಿಯು ಇತ್ಯರ್ಥವಾಗುವವರೆಗೂ ಕಾಯದೆ, ಸಂವಿಧಾನದ ಅನುಚ್ಛೇದ 311(2) ರಡಿಯಲ್ಲಿರುವ ಎರಡನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ನಾಗರೀಕ ಸೇವಾ (ವ.ನಿ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 14(1)ರ ಅನುಸಾರ ಆತನ ವಿರುದ್ದ ಶಿಸ್ತಿನ ಕ್ರಮ ಕೈಗೊಳ್ಳಬಹುದಾಗಿದೆ.

6) ಕರ್ನಾಟಕ ಲೋಕಸೇವಾ ಆಯೋಗ (ಕನ್ಸಲ್ಟೇಶನ್) ರೆಗ್ಯುಲೇಸನ್ 2000ದ ನಿಯಮ, 5(1) ರಲ್ಲಿನ ಪ್ರಾವಿಷನ್ ಅನ್ವಯ ಲೋಕಾಯುಕ್ತರವರಿಂದ ವಿಚಾರಣೆ ಕೈಗೊಂಡ ಶಿಸ್ತಿನ ಪ್ರಕರಣಗಳಲ್ಲಿ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿ 1957ರ ನಿಯಮ 8(v) ರಿಂದ (viii) ವರೆಗಿನ ದಂಡನೆಗಳನ್ನು ವಿದಿಸಬೇಕಾದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಪಡೆಯುವ ಅವಶ್ಯಕತೆಯಿರುವುದಿಲ್ಲ.

7) ಹಿಂದಿನ ಕಂಡಿಕೆಗಳಲ್ಲಿ ವಿವರಿಸಿರುವವನ್ವಯ, ಕರ್ನಾಟಕ ಲೋಕಾಯುಕ್ತರವರ ಶಿಫಾರಸ್ಸಿನಂತೆ ಹಾಗೂ ಕಾನೂನು ಇಲಾಖೆಯ ಅಭಿಪ್ರಾಯದ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿಯಾದ ಶ್ರೀ ಎ.ಆರ್. ಫಣೀಂದ್ರ ಕುಮಾರ್, ಸಹಾಯಕ ಅಭಿಯಂತರರು, ನಿರ್ದೇಶಕರ ಕಛೇರಿ, ರೇಷ್ಮೆ ಇಲಾಖೆ, ಬೆಂಗಳೂರು, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಗಳು, 1957ರ ನಿಯಮ, 8ರ ಉಪ ನಿಯಮ (viii) ಅನ್ವಯ ಸೇವೆಯಿಂದ ಕೂಡಲೇ ವಜಾಗೊಳಿಸುವ ದಂಡನೆಯನ್ನು ವಿದಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 112 ರೇಕೃವಿ 2005, ಬೆಂಗಳೂರು ದಿನಾಂಕ: 03ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎ.ಆರ್. ಫಣೀಂದ್ರಕುಮಾರ್, ಸಹಾಯಕ ಅಭಿಯಂತರರು, ನಿರ್ದೇಶಕರ ಕಛೇರಿ, ರೇಷ್ಮೆ ಇಲಾಖೆ, ಬೆಂಗಳೂರು, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಗಳು, 1957ರ ನಿಯಮ 8ರ ಉಪ ನಿಯಮ (viii) ಅನ್ವಯ ಸೇವೆಯಿಂದ ಕೂಡಲೇ ವಜಾಗೊಳಿಸುವ ದಂಡನೆಯನ್ನು ಸರ್ಕಾರವು ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ದೇವಿಕ**

ಪಿ.ಆರ್. 1463

ಸರ್ಕಾರದ ಅಧೀನ ಕಾರ್ಯದರ್ಶಿ (ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಉನ್ನತ ಶಿಕ್ಷಣ ಸಚಿವಾಲಯ**

**ವಿಷಯ :** 2007–08ನೇ ಶೈಕ್ಷಣಿಕ ಸಾಲಿಗೆ ಚಿತ್ರದುರ್ಗದ ಸೊಸೈಟಿ ಫಾರ್ ಎಜುಕೇಷನ್ ಫಾರ್ ಎನ್ವಿರಾನ್‌ಮೆಂಟ್ ಡೆವಲಪ್‌ಮೆಂಟ್‌ನ ಶ್ರೀ ರಾಘವೇಂದ್ರ ಶಿಕ್ಷಣ ಮಹಾವಿದ್ಯಾಲಯಕ್ಕೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ ಬಗ್ಗೆ.

**ಉಲ್ಲೇಖ :** 1) ಕರ್ನಾಟಕ ಸರ್ಕಾರದ ನಡವಳಿ ಸಂಖ್ಯೆ: ಇಡಿ 63 ಯುಎಸ್‌ವಿ 2006, ದಿ: 30–12–2006.
2) ಎನ್.ಸಿ.ಟಿ.ಇ. ಪತ್ರ ಸಂಖ್ಯೆ: S.SRO/NCTE/2006-07/6947, ದಿನಾಂಕ: 19–7–2007.
3) ಸಂಸ್ಥೆಯ ಕಾರ್ಯದರ್ಶಿಗಳ ಪತ್ರ ದಿನಾಂಕ: 30–10–2007.

**ಪೀಠಿಕೆ :**

ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಇಪಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಚಿತ್ರದುರ್ಗದ ಸೊಸೈಟಿ ಫಾರ್ ಎಜುಕೇಷನ್ ಫಾರ್ ಎನ್ವಿರಾನ್‌ಮೆಂಟ್ ಡೆವಲಪ್‌ಮೆಂಟ್, ಕೆ.ಬಿ. ಎಕ್ಸ್‌ಟೆನ್ಷನ್, ಕೋಟೆ ರಸ್ತೆ, ಇವರು ಶ್ರೀ ರಾಘವೇಂದ್ರ ಶಿಕ್ಷಣ ಮಹಾವಿದ್ಯಾಲಯದ ಬಿ.ಇಡಿ. ಕೋರ್ಸನ್ನು 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ದಿನಾಂಕ: 19–7–2007ರ ಆದೇಶದಲ್ಲಿ ಎನ್.ಸಿ.ಟಿ.ಇ. ಸದರಿ ಕಾಲೇಜಿನ ಬಿ.ಇಡಿ. ಕೋರ್ಸಿಗೆ 2007–08ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3) ರಲ್ಲಿರುವ ದಿನಾಂಕ: 30–10–2007ರ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು/ ಕಾರ್ಯದರ್ಶಿಗಳು ತಮ್ಮ ಕಾಲೇಜಿನಲ್ಲಿ ಬಿ.ಇಡಿ. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 118 ಯುಎಸ್‌ವಿ 2007, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2007**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ./ ಬಿ.ಪಿ.ಇಡಿ. ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಚಿತ್ರದುರ್ಗದ ಸೊಸೈಟಿ ಫಾರ್ ಎಜುಕೇಷನ್ ಫಾರ್ ಎನ್ವಿರಾನ್‌ಮೆಂಟ್ ಡೆವಲಪ್‌ಮೆಂಟ್, ಕೆ.ಬಿ. ಎಕ್ಸ್‌ಟೆನ್ಷನ್, ಕೋಟೆ ರಸ್ತೆ, ಇವರು ಶ್ರೀ ರಾಘವೇಂದ್ರ ಶಿಕ್ಷಣ ಮಹಾವಿದ್ಯಾಲಯದ ಇ.ಇಡಿ. ಕೋರ್ಸಿಗೆ 2007–08ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1987

**ಯು.ಬಿ. ಉಳವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ವಿಷಯ :** ದಿನಾಂಕ 21–7–2005ರ ಆದೇಶ ಸಂಖ್ಯೆ ಸಂವ್ಯಶಾಇ 38 ಆಡಳಿತ 2004ರಲ್ಲಿ ಪ್ರಾಂತೀಯ ಅಧಿನಿಯಮಗಳ ಕ್ರೋಢೀಕರಣ, ನಿರಸನ, ತಿದ್ದುಪಡಿಗಾಗಿ ಸೃಜಿಸಲಾದ ಶ್ರೀ ಕೆ.ಆರ್. ಚಾಮಯ್ಯ, ಏಕ ಸದಸ್ಯ ಸಮಿತಿಯನ್ನು ದಿನಾಂಕ 7–12–2007ರಿಂದ ಮತ್ತೊಂದು ವರ್ಷಕ್ಕೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ :** 1) ಕರ್ನಾಟಕ ವಿಧಾನ ಪರಿಷತ್ತಿನ ದಿನಾಂಕ: 28–3–2006ರ ನಡವಳಿ.
2) ಸರ್ಕಾರಿ ಆದೇಶ ಸಂಖ್ಯೆ ಸಂವ್ಯಶಾಇ 38 ಆಡಳಿತ 2004, ದಿನಾಂಕ 21–7–2005.
3) ಸರ್ಕಾರಿ ಆದೇಶ ಸಂಖ್ಯೆ ಸಂವ್ಯಶಾಇ 121 ಆಡಳಿತ 2006, ದಿನಾಂಕ 28–10–2006.
4) ಏಕ ಸದಸ್ಯ ಸಮಿತಿಯ ಕಡತ ಸಂಖ್ಯೆ: OMC/194/ಮಧ್ಯಕಾಲೀನ ವರದಿ–4/2007
5) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1115 ವೆಚ್ಚ 7/2007, ದಿನಾಂಕ: 16–10–2007.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿನ ದಿನಾಂಕ 28–3–2002ರ ಕರ್ನಾಟಕ ವಿಧಾನ ಪರಿಷತ್ತಿನ ನಡವಳಿಯ ರೀತ್ಯ ದಿನಾಂಕ: 1–11–1956ರಲ್ಲಿ ಹಿಂದಿನ ಅವಧಿಯಲ್ಲಿ ಹಾಗೂ ಈಗಲೂ ಚಾಲ್ತಿಯಲ್ಲಿರುವ ಪ್ರಾಂತೀಯ ಅಧಿನಿಯಮಗಳು ಅಂದರೆ

ಬೊಂಬಾಯಿ, ಹೈದರಾಬಾದ್, ಮದ್ರಾಸ್, ಕೊಡಗು, ಹಳೇ ಮೈಸೂರು, ಪ್ರದೇಶಗಳಲ್ಲಿನ ಅಧಿನಿಯಮಗಳ ಬಗ್ಗೆ ಅಧ್ಯಯನ ನಡೆಸಿ ಕ್ರೋಢೀಕರಣ, ನಿರಸನ, ತಿದ್ದುಪಡಿಗಾಗಿ ಏಕ ಸದಸ್ಯ ಸಮಿತಿಯನ್ನು ರಚಿಸಲು ತೀರ್ಮಾನಿಸಲಾಯಿತು.

ಮೇಲೆ ಓದಲಾದ (2)ರಲ್ಲಿನ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರದ ನಿವೃತ್ತ ಕಾನೂನು ಕಾರ್ಯದರ್ಶಿಗಳು ಹಾಗೂ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ನಿವೃತ್ತ ಉಪಾಧ್ಯಕ್ಷರು ಆದ ಶ್ರೀ ಕೆ.ಆರ್. ಚಾಮಯ್ಯರವರ ನೇತೃತ್ವದಲ್ಲಿ ಸಿಬ್ಬಂದಿ ಸಮೇತ ಏಕ ಸದಸ್ಯ ಸಮಿತಿಯನ್ನು ರಚಿಸಲಾಯಿತು. ಏಕ ಸದಸ್ಯ ಸಮಿತಿಯ ಅಧ್ಯಕ್ಷರು ಕಾರ್ಯವರದಿ ಮಾಡಿಕೊಂಡ ನಂತರದಿಂದ ಒಂದು ವರ್ಷದ ಮಟ್ಟಿಗೆ ಕಾಲಾವಧಿಯನ್ನು ನಿಗದಿಪಡಿಸಲಾಗಿತ್ತು. ಬೆಂಗಳೂರಿನ ವಿಶ್ವೇಶ್ವರಯ್ಯ ಮುಖ್ಯಗೋಪುರದ 11ನೇ ಮಹಡಿಯಲ್ಲಿ ಸದರಿ ಏಕ ಸದಸ್ಯ ಸಮಿತಿಗೆ ಸ್ಥಳಾವಕಾಶ ಕಲ್ಪಿಸಿದ ನಂತರ ಶ್ರೀ ಕೆ.ಆರ್. ಚಾಮಯ್ಯರವರು ದಿನಾಂಕ: 7–12–2005ರಂದು ಈ ಸಮಿತಿಯ ಕೆಲಸ ಕಾರ್ಯಗಳ ನಿರ್ವಹಣೆಗೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ ಓದಲಾದ (3)ರಲ್ಲಿನ ಸರ್ಕಾರಿ ಆದೇಶದಲ್ಲಿ ಏಕಸದಸ್ಯ ಸಮಿತಿಯ ಅವಧಿಯನ್ನು ದಿನಾಂಕ: 7–12–2006 ರಿಂದ ದಿನಾಂಕ 6–12–2007ರವರೆಗೆ ಒಂದು ವರ್ಷದವರೆಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ (4)ರಲ್ಲಿನ ಏಕಸದಸ್ಯ ಸಮಿತಿಯ ಕಡತದಲ್ಲಿ, ದಿನಾಂಕ 7–12–2007ರಿಂದ 31–3–2009ರ ವರೆಗೆ ಏಕ ಸದಸ್ಯ ಸಮಿತಿಯ ಕಾರ್ಯಾವಧಿಯನ್ನು ವಿಸ್ತರಿಸುವಂತೆ ಕೋರಲಾಗಿದೆ.

ಮೇಲೆ ಓದಲಾದ (5)ರಲ್ಲಿನ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಶ್ರೀ ಕೆ.ಆರ್. ಚಾಮಯ್ಯರವರ ಅಧ್ಯಕ್ಷತೆಯ ಏಕಸದಸ್ಯ ಸಮಿತಿಯ ಅವಧಿಯನ್ನು ದಿನಾಂಕ: 6–12–2007 ರಿಂದ ದಿನಾಂಕ 31–3–2009ರವರೆಗೆ ವಿಸ್ತರಿಸಲು ಸಹಮತಿಸಿದೆ.

ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 118 ಆಡಳಿತ 2007, ಬೆಂಗಳೂರು, ದಿನಾಂಕ: 6ನೇ ನವೆಂಬರ್ 2007**

ದಿನಾಂಕ 21–7–2005ರ ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 38 ಆಡಳಿತ 2004ರಲ್ಲಿ ರಚಿತವಾಗಿರುವ ಶ್ರೀ ಕೆ.ಆರ್. ಚಾಮಯ್ಯ, ಏಕ ಸದಸ್ಯ ಸಮಿತಿಯನ್ನು ದಿನಾಂಕ 7–12–2007ರಿಂದ ದಿನಾಂಕ: 31–3–2009ರವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಸದರಿ ಸಮಿತಿಗೆ ಮಂಜೂರು ಮಾಡಿರುವ ಪೂರಕ ಸಿಬ್ಬಂದಿಯನ್ನು, ವಾಹನ ಮತ್ತು ದೂರವಾಣಿ ಸೌಲಭ್ಯಗಳು ಹಾಗೂ ಏಕ ಸದಸ್ಯ ಸಮಿತಿಯ ಸದಸ್ಯರಾದ ಶ್ರೀ ಕೆ.ಆರ್. ಚಾಮಯ್ಯರವರ ಸೇವಾ ಷರತ್ತುಗಳು ಹಾಗೂ ಇತರೆ ಸೌಲಭ್ಯಗಳೊಂದಿಗೆ ಮೇಲೆ ಹೇಳಲಾದ ಅವಧಿಗೆ ಏಕ ಸದಸ್ಯ ಸಮಿತಿಯು ಮುಂದುವರಿಯುವಂತೆ ಆದೇಶಿಸಲಾಗಿದೆ.

ಈ ಸಮಿತಿಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2052–00–090–0–20– ಶ್ರೀ ಕೆ.ಆರ್. ಚಾಮಯ್ಯ, ಏಕಸದಸ್ಯ ಸಮಿತಿ ಅಡಿಯಲ್ಲಿ ಭರಿಸಬಹುದಾಗಿದೆ.

ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1115 ವೆಚ್ಚ 7/2007, ದಿನಾಂಕ 16–10–2007ರಲ್ಲಿನ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1988

**ಕೆ. ದ್ವಾರಕನಾಥ್ ಬಾಬು**

ಜಂಟಿ ಪ್ರಾರೂಪಕಾರ ಮತ್ತು ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ :** ರೇಷ್ಮೆ ಇಲಾಖೆಯ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಕರೇಕಲ್ಲಹಳ್ಳಿಯ 10 ಎಕರೆ ಜಮೀನನ್ನು ಮೊರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆ ಕಟ್ಟಡ ನಿರ್ಮಾಣಕ್ಕೆ ಬಿಟ್ಟುಕೊಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಪತ್ರ ಸಂಖ್ಯೆ ವಾಕೈ 26 ರೇಉನಿ 2006, ದಿ: 19–5–2006.
2) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸರೇಕೃಕ್ಷೇ/ ಕರೇಕಲ್ಲಹಳ್ಳಿ/ಜಮೀನು/3/06–07, ದಿನಾಂಕ: 29–1–2007.

**ಪ್ರಸ್ತಾವನೆ :**

ಗೌರಿಬಿದನೂರು ಟೌನ್ ಹತ್ತಿರವಿರುವ ಕರೇಕಲ್ಲಹಳ್ಳಿ ಗ್ರಾಮದಲ್ಲಿರುವ ರೇಷ್ಮೆ ಫಾರಂ ಜಮೀನನ್ನು ಬೇರೆ ಇಲಾಖೆಗೆ ನೀಡುವ ಕುರಿತಂತೆ ಅಭಿಪ್ರಾಯ ನೀಡಬೇಕಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರನ್ನು ಕೋರಲಾಗಿತ್ತು. ಸದರಿ ಪತ್ರದ ಹಿನ್ನೆಲೆಯಲ್ಲಿ ಕರೇಕಲ್ಲಹಳ್ಳಿ ಕೃಷಿ ಕ್ಷೇತ್ರದ ಒಟ್ಟು 30 ಎಕರೆ ಜಮೀನಿನಲ್ಲಿ ಸಾಮಾಜಿಕ ಅರಣ್ಯ 20 ಎಕರೆ ಪ್ರದೇಶವಿರುತ್ತದೆ. ಉಳಿದ 10 ಎಕರೆ ಪ್ರದೇಶದಲ್ಲಿ 0.24 ಎಕರೆ

ಜಮೀನಿನಲ್ಲಿ ಹಿಪ್ಪುನೇರಳೆ ತೋಟವಿರುವ ಬಗ್ಗೆ ಹಾಗೂ ಇಲಾಖಾ ಕಟ್ಟಡಗಳಿರುವ ಬಗ್ಗೆ ವಿವರಿಸಿ ಇಲಾಖೆಯಲ್ಲಿ 20 ಎಕರೆ ಪ್ರದೇಶವನ್ನು ಉಳಿಸಿಕೊಂಡು ಉಳಿದ 10 ಎಕರೆ ಜಮೀನಿನಲ್ಲಿ ಸರ್ವೆ ನಂ. 179 ರಲ್ಲಿ 3.20 ಎಕರೆ ಹಾಗೂ ಸರ್ವೆ ನಂ. 180ರಲ್ಲಿ 6.20 ಎಕರೆ ಪ್ರದೇಶವನ್ನು ವಿದ್ಯಾ ಸಂಸ್ಥೆಗೆ ಹಸ್ತಾಂತರಿಸಬಹುದಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದು, ಕೋಲಾರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು, ಕರೇಕಲ್ಲಹಳ್ಳಿ ರೇಷ್ಮೆ ಕೃಷಿ ಕ್ಷೇತ್ರದ ಒಟ್ಟು 30 ಎಕರೆ ಜಮೀನಿನಲ್ಲಿ 10 ಎಕರೆ ಜಮೀನನ್ನು ಕಸ್ತೂರಿಬಾ ಬಾಲಕಿಯರ ಮಾದರಿ ವಸತಿ ಶಾಲೆ ಮತ್ತು ಮೊರಾರ್ಜಿ ದೇಸಾಯಿ ಬಾಲಕರ ವಸತಿ ಶಾಲೆ ಪ್ರಾರಂಭಿಸಲು ಕಂದಾಯ ಇಲಾಖೆಗೆ ಹಿಂದಿರುಗಿಸಲು ಸರ್ಕಾರದ ಆದೇಶ ನೀಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಅಭಿಪ್ರಾಯದ ಹಿನ್ನೆಲೆಯಲ್ಲಿ ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದ್ದು, ಅವರು ಶಿಫಾರಸ್ಸು ಮಾಡಿರುವಂತೆ ಕರೇಕಲ್ಲಹಳ್ಳಿಯ ರೇಷ್ಮೆ ಕೃಷಿ ಕ್ಷೇತ್ರದ ಜಮೀನನ್ನು ಮೊರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆ ಕಟ್ಟಡ ನಿರ್ಮಾಣಕ್ಕಾಗಿ ಸಮಾಜ ಕಲ್ಯಾಣ ಇಲಾಖೆಗೆ ನೀಡಲು ತೀರ್ಮಾನಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 3 ರೇಯೋವಿ 2007, ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್ 2007**

ರೇಷ್ಮೆ ಇಲಾಖೆಯು ಕೋಲಾರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು, ಕರೇಕಲ್ಲಹಳ್ಳಿ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರದಲ್ಲಿ ಹೊಂದಿರುವ ಒಟ್ಟು 30 ಎಕರೆ ಜಮೀನಿನಲ್ಲಿ 10 ಎಕರೆ ಜಮೀನನ್ನು ಕಸ್ತೂರಿಬಾ ಬಾಲಕಿಯರ ಮಾದರಿ ವಸತಿ ಶಾಲೆ ಮತ್ತು ಮೊರಾರ್ಜಿ ದೇಸಾಯಿ ಬಾಲಕರ ವಸತಿ ಶಾಲೆ ಕಟ್ಟಡ ನಿರ್ಮಾಣಕ್ಕಾಗಿ ಸಮಾಜ ಕಲ್ಯಾಣ ಇಲಾಖೆಗೆ ನೀಡುವುದಕ್ಕೆ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಆರ್‌ಡಿ 78 ಎಲ್‌ಜಿಹೆಚ್ 2007, ದಿನಾಂಕ: 21–8–2007ರಲ್ಲಿ ಕಂದಾಯ ಇಲಾಖೆಯು ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1796

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ :** ಮೈಸೂರಿನ ಸಿ.ಟಿ.ಐ. ಕಟ್ಟಡದಲ್ಲಿ ಖಾಲಿಯಿರುವ ಕೊಠಡಿಗಳನ್ನು ಕಾವಾ ಸಂಸ್ಥೆಯ ಉಪಯೋಗಕ್ಕೆ ನೀಡುವ ಕುರಿತು.

**ಓದಲಾಗಿದೆ :** 1) ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಸಚಿವರ ಟಿಪ್ಪಣಿ ಸಂಖ್ಯೆ: ಕಸಂಸ/1018/07, ದಿನಾಂಕ: 16–8–2007.

2) ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಅ.ಸ.ಪ.ಸಂಖ್ಯೆ: ಜಿಕೈಕೇ/ಚಾತಸಂ/ಕಾವಾ/37/2005–06, ದಿನಾಂಕ: 1–9–2007.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಟಿಪ್ಪಣಿಯಲ್ಲಿ ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಸಚಿವರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಧೀನದಲ್ಲಿರುವ ಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿ (ಕಾವಾ) ಯು.ಜಿ.ಸಿ. ಪ್ರಾಯೋಜಿತ ನ್ಯಾಕ್ ಪೀರ್ ಸಮಿತಿಯಿಂದ "ಬಿ+" ಮಾನ್ಯತೆ ಪಡೆದಿದ್ದು, ಕಾವಾ ಸಂಸ್ಥೆಯ ಕೋರ್ಸ್‌ಗಳಿಗೆ ಬೇಡಿಕೆ ಹೆಚ್ಚುತ್ತಿರುವುದರಿಂದ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ (ಸಿ.ಟಿ.ಐ.)ಯಲ್ಲಿ ಖಾಲಿಯಿರುವ ಕೆಲವು ಕೊಠಡಿಗಳನ್ನು ಕಾವಾ ಸಂಸ್ಥೆಯ ಉಪಯೋಗಕ್ಕೆ ನೀಡಲು ಕೋರಿರುತ್ತಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರು ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯನ್ನು ಸ್ವಾಯತ್ತ ಸಂಸ್ಥೆಯನ್ನಾಗಿ ಪರಿವರ್ತಿಸುವ ಪ್ರಸ್ತಾವನೆಯು ಅಂತಿಮ ಹಂತದಲ್ಲಿರುವುದರಿಂದ ಸಿ.ಟಿ.ಐ. ಕಟ್ಟಡದಲ್ಲಿನ ಮೂರು ಕೊಠಡಿಗಳಲ್ಲಿ ತರಬೇತಿಗೆ ಅವಶ್ಯಕವಾದ ಯಂತ್ರೋಪಕರಣಗಳು ಹಾಗೂ ಉಪಕರಣಗಳು ಇರುವುದರಿಂದ ಈ ಹಿನ್ನೆಲೆಯಲ್ಲಿ ಕೊಠಡಿಗಳನ್ನು ಬಿಟ್ಟುಕೊಡುವಲ್ಲಿ ಕಷ್ಟ ಸಾಧ್ಯವಾಗುವುದಾಗಿ ತಿಳಿಸಿರುತ್ತಾರೆ. ಆದಾಗ್ಯೂ, ಸರ್ಕಾರ ಬಯಸಿದ್ದಲ್ಲಿ, ಮೂರು ಕೊಠಡಿಗಳಲ್ಲಿನ ಯಂತ್ರೋಪಕರಣಗಳನ್ನು ಎರಡು ಕೊಠಡಿಗಳಿಗೆ ಸ್ಥಳಾಂತರಿಸಿ, ಕಾವಾದವರಿಗೆ ಈಗಾಗಲೇ ಮೈಸೂರಿನಲ್ಲಿ ಭೂಮಿಯನ್ನು ಮಂಜೂರು ಮಾಡಿರುವುದರಿಂದ ಹಾಗೂ ಮುಂದಿನ ಎರಡು ವರ್ಷಗಳಲ್ಲಿ ಅಲ್ಲಿಗೆ ಸ್ಥಳಾಂತರಿಸಲು ಸಾಧ್ಯತೆ ಇರುವುದರಿಂದ ಕಾವಾ ಸಂಸ್ಥೆಯವರು ಸಿ.ಟಿ.ಐ. ಕಟ್ಟಡವನ್ನು ಎರಡು ವರ್ಷಗಳಲ್ಲಿ ತೆರವುಗೊಳಿಸಿ ಹೊಸ ಜಾಗಕ್ಕೆ ಸ್ಥಳಾಂತರಿಸುವ ನಿಬಂಧನೆಯೊಂದಿಗೆ ಒಂದು ಕೊಠಡಿಯನ್ನು ಎರಡು ವರ್ಷಗಳ ಮಟ್ಟಿಗೆ ನೀಡುವ ಬಗ್ಗೆ ಪರಿಶೀಲಿಸಬಹುದು ಎಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 12 ಕೈಯೋವಿ 2007, ಬೆಂಗಳೂರು, ದಿನಾಂಕ: 4ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ವ್ಯಾಪ್ತಿಯಲ್ಲಿನ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ (ಸಿ.ಟಿ.ಐ.)ಯ ಕಟ್ಟಡದಲ್ಲಿನ ಮೂರು ಕೊಠಡಿಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಧೀನದಲ್ಲಿರುವ ಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿ (ಕಾವಾ) ಸಂಸ್ಥೆಯ ತರಬೇತಿಗಳ ಉಪಯೋಗಕ್ಕಾಗಿ ಎರಡು ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಉಪಯೋಗಿಸಿಕೊಳ್ಳಲು ಸರ್ಕಾರದ ಅನುಮತಿ ನೀಡಿದೆ.

1) ಯಾವುದೇ ಕಾರಣಕ್ಕೂ ಸದರಿ ಕೊಠಡಿಗಳನ್ನು ಬೇರೆಯವರಿಗೆ ಪರಭಾರೆ ಮಾಡಬಾರದು.
2) ಸದರಿ ಕೊಠಡಿಗಳ ನಿರ್ವಹಣಾ ವೆಚ್ಚವನ್ನು ಕಾವಾ ಸಂಸ್ಥೆಯವರೇ ಭರಿಸುವುದು.
3) ಯಾವ ಉದ್ದೇಶಕ್ಕೆ ಕೊಠಡಿಗಳನ್ನು ನೀಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸಿಕೊಳ್ಳತಕ್ಕದ್ದು.
4) ಸದರಿ ಕೊಠಡಿಗಳನ್ನು ತೆರವುಗೊಳಿಸಲು ಸೂಚಿಸಿದಲ್ಲಿ ಕೂಡಲೇ ತೆರವುಗೊಳಿಸಲು ಕ್ರಮ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1797

**ಎಸ್. ಉಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
(ಸೇವೆಗಳು)

**ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ**

**ವಿಷಯ :** ಕರ್ನಾಟಕ ರಾಜ್ಯದ ವಿವಿಧ ಪ್ರಮುಖ ಪ್ರವಾಸಿ ಕೇಂದ್ರಗಳಲ್ಲಿ ಸಿಮೆಂಟ್ ಕಾಂಕ್ರೀಟ್ ಹೆಲಿಪ್ಯಾಡ್‌ಗಳನ್ನು ನಿರ್ಮಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಮೂಅಇ 110 ರಾಅವಿ 2006, ದಿನಾಂಕ: 22–2–2007.
2) ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ ಇವರ ಪತ್ರ ಸಂಖ್ಯೆ. ಇತರೆ ಅಭಿವೃದ್ಧಿ/1/2007–08, ದಿನಾಂಕ: 4–7–2007.
3) ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ ಇವರ ಪತ್ರ ಸಂಖ್ಯೆ: ಕಂದಾಯ:ಎಂ.ಎಸ್.ಸಿ.124: 2006–07 ದಿನಾಂಕ: 7–6–2007.

**ಪ್ರಸ್ತಾವನೆ :**

ಮೇಲೆ ಕ್ರ.ಸ.1ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 22–2–2007ರಲ್ಲಿ ರಾಜ್ಯದ ಪ್ರಮುಖ 19 ಸ್ಥಳಗಳಲ್ಲಿ ಶಾಶ್ವತ (ಸಿಮೆಂಟ್ ಕಾಂಕ್ರೀಟ್) ಹೆಲಿಪ್ಯಾಡ್‌ಗಳನ್ನು ನಿರ್ಮಿಸಲು ಅನುಮೋದನೆ ನೀಡಿ ಪ್ರತಿ ಹೆಲಿಪ್ಯಾಡ್‌ಗೆ ಗರಿಷ್ಠ ರೂ. 10.00 ಲಕ್ಷಗಳ ಬಿಡುಗಡೆಗೆ ಮಂಜೂರಾತಿ ನೀಡಿರುತ್ತದೆ. ಈ ಆದೇಶದಂತೆ ಅನುಮೋದನೆ ನೀಡಿದ ಸ್ಥಳಗಳಿಗೆ ಸಂಬಂಧಿಸಿದ ಜಿಲ್ಲಾಧಿಕಾರಿಗಳು ತಮ್ಮ ವ್ಯಾಪ್ತಿಗೆ ಬರುವ ಸ್ಥಳಗಳಲ್ಲಿ ಹೆಲಿಪ್ಯಾಡ್ ನಿರ್ಮಿಸಲು ಪ್ರತಿ ಹೆಲಿಪ್ಯಾಡ್‌ಗೆ ರೂ. 10.00 ಲಕ್ಷದಂತೆ ಹಣವನ್ನು ಪೇಯಿಸ್ ರಸೀತಿಯ ಮೂಲಕ ಪಡೆದುಕೊಂಡಿರುತ್ತಾರೆ.

2) ಮೇಲೆ ಕ್ರಮ ಸಂಖ್ಯೆ.2 ರಲ್ಲಿ ಓದಲಾದ ಪತ್ರ ದಿನಾಂಕ 4–7–2007 ರಲ್ಲಿ ಕೊಡಗು ಜಿಲ್ಲಾಧಿಕಾರಿಗಳು ಕೊಡಗು ಜಿಲ್ಲೆಯಲ್ಲಿ ಸಿಮೆಂಟ್ ಕಾಂಕ್ರೀಟ್ ಹೆಲಿಪ್ಯಾಡ್ ನಿರ್ಮಿಸಲು 2007–08ನೇ ಸಾಲಿನಲ್ಲಿ ಆಯವ್ಯಯದಿಂದ ಹಣ ಬಿಡುಗಡೆ ಮಾಡುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

3) ಅದೇ ರೀತಿ ಮೇಲೆ ಕ್ರಮ ಸಂಖ್ಯೆ.3 ರಲ್ಲಿ ಓದಲಾದ ಪತ್ರ ದಿನಾಂಕ: 7–6–2007ರಲ್ಲಿ ರಾಯಚೂರು ಜಿಲ್ಲಾಧಿಕಾರಿಗಳು ರಾಯಚೂರು ಜಿಲ್ಲೆಯಲ್ಲಿ ಹೆಲಿಪ್ಯಾಡ್‌ನ್ನು ನಿರ್ಮಿಸಲು ಹಣ ಬಿಡುಗಡೆ ಮಾಡುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

4) ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮೂಅಇ 110 ರಾಅವಿ 2006, ಬೆಂಗಳೂರು, ದಿನಾಂಕ: 1ನೇ ಅಕ್ಟೋಬರ್ 2007**

ಕೊಡಗು ಮತ್ತು ರಾಯಚೂರು ಜಿಲ್ಲೆಗಳಲ್ಲಿ ಸಿಮೆಂಟ್ ಕಾಂಕ್ರೀಟ್ ಹೆಲಿಪ್ಯಾಡ್‌ಗಳನ್ನು ನಿರ್ಮಿಸಲು ಪ್ರತಿ ಹೆಲಿಪ್ಯಾಡ್‌ಗೆ ತಲಾ ರೂ. 10.00 ಲಕ್ಷದಂತೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

2) ಈ ಮೊತ್ತವನ್ನು 2007–08ರ ಆಯವ್ಯಯದ ಲೆಕ್ಕ ಶೀರ್ಷಿಕೆ, 5465–01–190–1–05–211 ರಡಿಯಲ್ಲಿ ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿಗಾಗಿ ಒದಗಿಸಿರುವ ಮೊತ್ತದಿಂದ ಭರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

3) ಈ ಹಣವನ್ನು ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ ಹಾಗೂ ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ ಇವರುಗಳು ಪೇಯೀಸ್ ರಸೀತಿ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ, ಅಭಿವೃದ್ಧಿ ಇಲಾಖೆ ಇವರ ಮೇಲು ರುಜು ಪಡೆದು ತೆಗೆಯುವುದು.

4) ಈ ಆದೇಶವನ್ನು ಆರ್ಥಿಕ ಇಲಾಖೆ ಅ.ಟಿ.ಸಂ.ಆಇ 1485 ವೆಚ್ಚ I/2007, ದಿನಾಂಕ: 21-9-2007ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1798

**ಎನ್. ಮಂಜುಳ ಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

**ಕಾರ್ಮಿಕ ಸಚಿವಾಲಯ**

**ವಿಷಯ :** 2007-08ನೇ ಸಾಲಿನಲ್ಲಿ ಹೊಸದಾಗಿ ಸ್ಥಾಪಿಸುವ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ವೃತ್ತಿಗಳ ಮಂಜೂರಾತಿ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಕಾ.ಇ. 138 ಇಟಿಐ 2007, ದಿ: 13-8-2007

2) ಸರ್ಕಾರದ ಆದೇಶ ಸಂಖ್ಯೆ: ಕಾ.ಇ. 138 ಇಟಿಐ 2007, ದಿ: 18-8-2007

3) ಸರ್ಕಾರದ ಆದೇಶ ಸಂಖ್ಯೆ: ಕಾ.ಇ. 138 ಇಟಿಐ 2007, ದಿ: 3-9-2007

4) ಪತ್ರ ಸಂಖ್ಯೆ: ಉತನಿ/ತ/ಯೋ-01/ವಿವ-06/2007-08, ದಿ: 4-9-2007.

**ಪ್ರಸ್ತಾವನೆ :**

ರಾಜ್ಯದ 10 ತಾಲ್ಲೂಕುಗಳಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಲು 2007-08ನೇ ಸಾಲಿನ ಆಯವ್ಯಯದಲ್ಲಿ ರೂ. 300.00 ಲಕ್ಷಗಳನ್ನು ಒದಗಿಸಲಾಗಿತ್ತು.

ಮೇಲೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ 2007-08ನೇ ಸಾಲಿನಲ್ಲಿ ರಾಜ್ಯದ ಮೊಸಳೇ ಹೊಸಹಳ್ಳಿ, ಕುಣಿಗಲ್, ಉದಯಪುರ, ಸಕಲೇಶಪುರ, ಸಾಲಿಗ್ರಾಮ, ಸಕ್ಕರಾಯಪಟ್ಟಣ, ಗೋಕಾಕ, ಆಲೂರು, ಮಾಗಡಿ, ಶಿಡ್ಲಘಟ್ಟ, ಕಿತ್ತೂರು, ನವಲಗುಂದ, ಜಗಳೂರು, ಇಟಗಿ, ಬಿಡ್ಕಲ್‌ಕಟ್ಟೆ, ಹಾರೋಹಳ್ಳಿ, ಬೇಗೂರು, ಹರಿಹರಪುರ, ಭಟ್ಕಳ, ಕುರಗೋಡು, ಸಂಡೂರು, ಬಾಗೂರು, ಕೆಸ್ತೂರು ಮತ್ತು ಚಿನಕುರಳಿಗಳಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಹೊಸದಾಗಿ ಪ್ರಾರಂಭಿಸಲು ಹಾಗೂ 09 ಹೊಸ ವೃತ್ತಿಗಳಿಗೆ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿ ಹೊರಡಿಸಲಾದ ಸರ್ಕಾರಿ ಆದೇಶವನ್ನು ಭಾಗಶಃ ಮಾರ್ಪಡಿಸಿ, ಕುರಗೋಡು, ಬಳ್ಳಾರಿ ತಾಲ್ಲೂಕು, ಇಲ್ಲಿಗೆ ಬದಲಾಗಿ ಕುಡಿತಿನಿ, ಬಳ್ಳಾರಿ ತಾಲ್ಲೂಕು ಇಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಸ್ಥಾಪಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಸರ್ಕಾರದ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದೆ.

ಆಯುಕ್ತರು, ಉದ್ಯೋಗ ಮತ್ತು ತರಬೇತಿ, ಬೆಂಗಳೂರು ಇವರು ಮೇಲೆ (4)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಮೇಲ್ಕಂಡ 24 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಈ ಕೆಳಗಿನ ವೃತ್ತಿಗಳನ್ನು ಪ್ರತಿಯೊಂದು ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಮತ್ತು ಸೂಕ್ತ ಸಿಬ್ಬಂದಿಯನ್ನು ಮಂಜೂರು ಮಾಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಪ್ರತೀ ಸಂಸ್ಥೆಯಲ್ಲಿ ಪ್ರಾರಂಭಿಸಲಾಗುವ ವೃತ್ತಿಗಳು | ಪ್ರತೀ ಸಂಸ್ಥೆಯಲ್ಲಿ ಪ್ರಾರಂಭಿಸಲಾಗುವ ಘಟಕಗಳು | ತರಬೇತಿ ಅವಧಿ |
|---|---|---|
| 1) ಎಲೆಕ್ಟ್ರೀಷಿಯನ್ | 2 ಘಟಕ | 2 ವರ್ಷ |
| 2) ಇಲೆಕ್ಟ್ರಾನಿಕ್-ಮೆಕಾನಿಕ್ | 2 ಘಟಕ | 2 ವರ್ಷ |
| 3) ಪಿಟ್ಟರ್ | 2 ಘಟಕ | 2 ವರ್ಷ |
| 4) ಟರ್ನರ್ | 2 ಘಟಕ | 2 ವರ್ಷ |
| 5) ಎಂ.ಎಂ.ವಿ. | 2 ಘಟಕ | 2 ವರ್ಷ |
| 6) ಐ.ಟಿ. & ಇ.ಎಸ್.ಎಂ. | 2 ಘಟಕ | 2 ವರ್ಷ |
| 7) ಡೀಸೆಲ್ ಮೆಕಾನಿಕ್ | 2 ಘಟಕ | 1 ವರ್ಷ |
| 8) ಡ್ರೆಸ್ ಮೇಕಿಂಗ್ | 2 ಘಟಕ | 1 ವರ್ಷ |
| 9) ಎಂ.ಆರ್.ಎ.ಸಿ. | 2 ಘಟಕ | 2 ವರ್ಷ |

ವಿಷಯವನ್ನು ಪರಿಶೀಲಿಸಿದ ನಂತರ ಹೊಸದಾಗಿ ಸ್ಥಾಪಿಸಿದ 24 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ 9 ವೃತ್ತಿಗಳನ್ನು ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 138 ಇಟಿಐ 2007(ಭಾಗ), ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2007**

ರಾಜ್ಯದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯಡಿ 2007-08ನೇ ಸಾಲಿನಲ್ಲಿ ಹೊಸದಾಗಿ ಸ್ಥಾಪಿಸಲ್ಪಟ್ಟಿರುವ ಮೊಸಳೇಹೊಸಹಳ್ಳಿ, ಕುಣಿಗಲ್, ಉದಯಪುರ, ಸಕಲೇಶಪುರ, ಸಾಲಿಗ್ರಾಮ, ಸಕ್ಕರಾಯಪಟ್ಟಣ, ಗೋಕಾಕ, ಆಲೂರು,

ಮಾಗಡಿ, ಶಿಡ್ಲಘಟ್ಟ, ಕಿತ್ತೂರು, ನವಲಗುಂದ, ಜಗಳೂರು, ಇಟಗಿ, ಬಿಡ್ಕಲ್‌ಕಟ್ಟೆ, ಹಾರೋಹಳ್ಳಿ, ಬೇಗೂರು, ಹರಿಹರಪುರ, ಭಟ್ಕಳ, ಕುಡಿತಿನಿ, ಸಂಡೂರು, ಬಾಗೂರು, ಕೆಸ್ತೂರು ಮತ್ತು ಚಿನಕುರಳಿಗಳಲ್ಲಿನ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಕೆಳಕಂಡ 9 ವೃತ್ತಿಗಳನ್ನು ಈ ಮೂಲಕ ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಪ್ರಾರಂಭಿಸಲು ಅನುಮತಿ ನೀಡಲಾಗಿದೆ.

| ಪ್ರತೀ ಸಂಸ್ಥೆಯಲ್ಲಿ ಪ್ರಾರಂಭಿಸಲಾಗುವ ವೃತ್ತಿಗಳು | ಪ್ರತೀ ಸಂಸ್ಥೆಯಲ್ಲಿ ಪ್ರಾರಂಭಿಸಲಾಗುವ ಘಟಕಗಳು | ತರಬೇತಿ ಅವಧಿ |
|---|---|---|
| 1) ಎಲೆಕ್ಟ್ರೀಷಿಯನ್ | 2 ಘಟಕ | 2 ವರ್ಷ |
| 2) ಇಲೆಕ್ಟ್ರಾನಿಕ್–ಮೆಕಾನಿಕ್ | 2 ಘಟಕ | 2 ವರ್ಷ |
| 2) ಫಿಟ್ಟರ್ | 2 ಘಟಕ | 2 ವರ್ಷ |
| 3) ಟರ್ನರ್ | 2 ಘಟಕ | 2 ವರ್ಷ |
| 4) ಎಂ.ಎಂ.ವಿ. | 2 ಘಟಕ | 2 ವರ್ಷ |
| 5) ಐ.ಟಿ. & ಇ.ಎಸ್.ಎಂ. | 2 ಘಟಕ | 2 ವರ್ಷ |
| 6) ಡೀಸೆಲ್ ಮೆಕಾನಿಕ್ | 2 ಘಟಕ | 1 ವರ್ಷ |
| 7) ಡ್ರೆಸ್ ಮೇಕಿಂಗ್ | 2 ಘಟಕ | 1 ವರ್ಷ |
| 8) ಎಂ.ಆರ್.ಎ.ಸಿ. | 2 ಘಟಕ | 2 ವರ್ಷ |

ಭಾರತ ಸರ್ಕಾರದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1922

**ಅಬ್ದುಲ್ ರೆಹಮಾನ್**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ
(ಉದ್ಯೋಗ ಮತ್ತು ತರಬೇತಿ)

## ಲೋಕೋಪಯೋಗಿ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ಮತಕ್ಷೇತ್ರ ವ್ಯಾಪ್ತಿಯ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ, ಇವರ ಪತ್ರ ಸಂಖ್ಯೆ: ಸಿಬಿಎನ್:ಹೈಲ್ಯಸೆ: ಕಸಂ–7/11 ಗ್ರಾರಸ್ತೆ: ಮೇಲ್ದರ್ಜೆ:ಗುಲ್ಬರ್ಗಾ:07–08, ದಿನಾಂಕ: 10–9–2007.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರು ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ಮತಕ್ಷೇತ್ರ ವ್ಯಾಪ್ತಿಯ 8 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ತುಂಬಾ ದುಸ್ಥಿತಿಯಲ್ಲಿದ್ದು ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದುದರಿಂದ ಈ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ಮರಳಗೋಳ –ಭಾಗೋಡಿ ರಸ್ತೆ | 11.00 |
| 2 | ಚಿತ್ತಾಪುರದಿಂದ ಹಾಣಿಕೇರಾ ರಸ್ತೆ ವಾಯಾ: ಕರದಾಳ | 14.50 |
| 3 | ಹದನೂರದಿಂದ ಕೊರವಾರ ರಸ್ತೆ ವಾಯಾ ಮತ್ತಮೂಡ –ಇಂದನಕಲ್–ಮುಚವಾಡ | 19.00 |
| 4 | ರೇವಣಸಿದ್ದೇಶ್ವರ ಮಂದಿರದಿಂದ ಚಂದನಕೇರಾ ರಸ್ತೆ ವಾಯಾ ಬೆಡ್‌ಸೂರ. ಎಂ ತಾಂಡಾ | 8.00 |
| 5 | ಎಂ. ತಾಂಡದಿಂದ ಚೇಂಗಟಾ ರಸ್ತೆ ವಾಯಾ ಕ. ತಾಂಡ ಕಬ್ಬಿಣಗುತ್ತಿ | 14.00 |
| 6 | ಗುಲ್ಬರ್ಗಾ ರಿಂಗ್ ರೋಡ್‌ದಿಂದ ಖಾಜಿ ಕೋರನೂರ ವಾಯಾ ಕುಸನೂರ –ಜಾಪುರ –ಪಾಳಾ –ಶ್ರೀನಿವಾಸ –ಸರಡಗಿ | 30.00 |
| 7. | ಮಾಲಗತ್ತಿ ಕ್ರಾಸ್‌ನಿಂದ ಬೊಳೆವಾಡ ರಸ್ತೆ ವಾಯಾ ನಿಪ್ಪಾಣಿ –ಇಟಗಾ –ಕಲಬೇನೂರ | 24.00 |

| | | |
|---|---|---|
| 8. | ಅವರಾದ (ರಾಷ್ಟ್ರೀಯ ಹೆದ್ದಾರಿ–218) ಜಮಗಾ (ರಾಜ್ಯ ಹೆದ್ದಾರಿ –51ಕ್ಕೆ) ರಸ್ತೆ ವಾಯಾ ಬಣ್ಣೂರ –ಕುಮಸಿ | 10.60 |
| | ಒಟ್ಟು | **131.10** |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 468 ಸಿಆರ್‌ಎಂ 2007, ಬೆಂಗಳೂರು, ದಿನಾಂಕ: 4ನೇ ಅಕ್ಟೋಬರ್ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ 8 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ಮರಳಗೋಳ –ಭಾಗೋಡಿ ರಸ್ತೆ | 11.00 |
| 2 | ಚಿತ್ತಾಪುರದಿಂದ ಹಾಣಿಕೇರಾ ರಸ್ತೆ ವಾಯಾ: ಕರದಾಳ | 14.50 |
| 3 | ಹದನೂರದಿಂದ ಕೊರವಾರ ರಸ್ತೆ ವಾಯಾ ಮತ್ತಮೂಡ –ಇಂದನಕಲ್–ಮುಚವಾಡ | 19.00 |
| 4 | ರೇವಣಸಿದ್ದೇಶ್ವರ ಮಂದಿರದಿಂದ ಚಂದನಕೇರಾ ರಸ್ತೆ ವಾಯಾ ಬೆಡ್‌ಸೂರ. ಎಂ ತಾಂಡಾ | 8.00 |
| 5 | ಎಂ. ತಾಂಡದಿಂದ ಚೇಂಗಟಾ ರಸ್ತೆ ವಾಯಾ ಕ. ತಾಂಡ ಕಬ್ಬಿಣಗುತ್ತಿ | 14.00 |
| 6 | ಗುಲ್ಬರ್ಗಾ ರಿಂಗ್ ರೋಡ್‌ದಿಂದ ಖಾಜಿ ಕೋರನೂರ ವಾಯಾ ಕುಸನೂರ –ಜಾಪುರ –ಪಾಳಾ –ಶ್ರೀನಿವಾಸ –ಸರಡಗಿ | 30.00 |
| 7. | ಮಾಲಗತ್ತಿ ಕ್ರಾಸ್‌ನಿಂದ ಬೊಳೆವಾಡ ರಸ್ತೆ ವಾಯಾ ನಿಪ್ಪಾಣಿ –ಇಟಗಾ –ಕಲಬೇನೂರ | 24.00 |
| 8. | ಅವರಾದ (ರಾಷ್ಟ್ರೀಯ ಹೆದ್ದಾರಿ–218) ಜಮಗಾ (ರಾಜ್ಯ ಹೆದ್ದಾರಿ –51ಕ್ಕೆ) ರಸ್ತೆ ವಾಯಾ ಬಣ್ಣೂರ –ಕುಮಸಿ | 10.60 |
| | ಒಟ್ಟು | **131.10** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1850

**ಎಸ್.ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ)

**ಕಾರ್ಮಿಕ ಸಚಿವಾಲಯ**

**ವಿಷಯ :** ವೆಬ್ ಎನೇಬಲ್ಡ್ ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪೋರ್ಟಲ್‌ನ ಯೋಜನೆಯನ್ವಯ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿನ ಜೀವವಹಿಯಲ್ಲಿರುವ ಅಭ್ಯರ್ಥಿಗಳ ಡೇಟಾ ಎಂಟ್ರಿ ಕಾರ್ಯವನ್ನು ನಿರ್ವಹಿಸಲು M/s. Sumukha Technologies, M.C. Layout, Vijayanagar, ಇವರಿಗೆ ವಹಿಸುವ ಬಗ್ಗೆ.

**ಓದಲಾಗಿದೆ :** ಉದ್ಯೋಗ ಮತ್ತು ತರಬೇತಿ ಇಲಾಖೆಯ ಆಯುಕ್ತರ ಪತ್ರ ಸಂ. ಎಸ್‌ಸಿಇ/ಗಣಕ/ವಿವ–17/ 2007–08/1992, ದಿನಾಂಕ 15–10–2007.

**ಪ್ರಸ್ತಾವನೆ :**

ಆಯುಕ್ತರು, ಉದ್ಯೋಗ ಮತ್ತು ತರಬೇತಿ, ಬೆಂಗಳೂರುರವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ Web Enabled Employment Exchange Portal ನ ಯೋಜನೆಯು ರಾಷ್ಟ್ರೀಯ ಯೋಜನೆಯಾಗಿದ್ದು ಈ ಯೋಜನೆಯನ್ವಯ ರಾಷ್ಟ್ರದ ಎಲ್ಲಾ ಉದ್ಯೋಗ ವಿನಿಮಯ ಕೇಂದ್ರಗಳನ್ನು ಗಣಕೀಕರಿಸಿ ಅಂತರ್‌ಜಾಲದಲ್ಲಿ ಅಳವಡಿಸಿ ರಾಜ್ಯದ ಅಭ್ಯರ್ಥಿಗಳಿಗೆ ಉದ್ಯೋಗಾವಕಾಶವನ್ನು ಕಲ್ಪಿಸಲು ಉದ್ದೇಶಿಸಲಾಗಿದೆ. ಎನ್.ಐ.ಸಿ. ಸಂಸ್ಥೆಯು ಎಲ್ಲಾ ರಾಜ್ಯಗಳಿಗೂ ಅನುವಾಗುವಂತೆ ಒಂದು ತಂತ್ರಾಂಶವನ್ನು ಅಭಿವೃದ್ಧಿಪಡಿಸಿದ್ದು ಅದನ್ನು ಎಲ್ಲಾ ರಾಜ್ಯಗಳೂ ಅನುಸರಿಸಬೇಕಿದೆ. ಅದರಂತೆ ರಾಜ್ಯದಲ್ಲಿನ ಈ ಕೆಳಗಿನ 20 ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಸುಮಾರು 7.5 ಲಕ್ಷ ಅಭ್ಯರ್ಥಿಗಳ ಡಾಟಾ ಎಂಟ್ರಿ ಮಾಡಬೇಕಾಗುವುದಾಗಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ಆಯುಕ್ತರು ತಿಳಿಸಿದ್ದಾರೆ.

| | | | | | |
|---|---|---|---|---|---|
| 1 | ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು | 2 | ಜಿಲ್ಲಾ ಉದ್ಯೋಗ, ವಿನಿಮಯ ಕೇಂದ್ರ, ತುಮಕೂರು | 3 | ಜಿಲ್ಲಾ ಉದ್ಯೋಗ, ವಿನಿಮಯ ಕೇಂದ್ರ, ಚಾಮರಾಜನಗರ |

| | | | | | |
|---|---|---|---|---|---|
| 4 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಿತ್ರದುರ್ಗಾ | 5 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಿಜಾಪುರ | 6 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಳ್ಳಾರಿ |
| 7 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ರಾಯಚೂರು | 8 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಕೊಪ್ಪಳ | 9 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೀದರ್ |
| 10 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹಾವೇರಿ | 11 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಾಗಲಕೋಟೆ | 12 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೆಳಗಾಂ |
| 13 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಗುಲ್ಬರ್ಗಾ | 14 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಕೋಲಾರ | 15 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹಾಸನ |
| 16 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮೈಸೂರು | 17 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಶಿವಮೊಗ್ಗ | 18 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಉಡುಪಿ |
| 19 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ದಾವಣಗೆರೆ | 20 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಕಾರವಾರ | | |

ಈ ಯೋಜನೆಯನ್ನು ಕಾರ್ಯಗತಗೊಳಿಸಲು ಇಲಾಖೆಯ ಹಂತದಲ್ಲೇ ಟೆಂಡರ್ ಮುಖಾಂತರ Data Service providers ಸಂಸ್ಥೆಗಳಿಂದ ಪ್ರತಿಯೊಂದು Employment Index Card ಅನ್ನು ಡಾಟಾ ಎಂಟ್ರಿ ಮಾಡಲು ಟೆಂಡರ್ ಅನ್ನು ದಿನಾಂಕ 3–9–2007ರಂದು ಆಹ್ವಾನಿಸಿದ್ದು, ಟೆಂಡರ್ ಪರಿಶೀಲನೆಯನ್ನು ಕೆ.ಟಿ.ಪಿ.ಪಿ. ಆಕ್ಟ್ ಪ್ರಕಾರ ಕೈಗೊಂಡಿದ್ದು ಅದರಲ್ಲಿ ಭಾಗವಹಿಸಿದ್ದ 03 ಸಂಸ್ಥೆಗಳ ಪೈಕಿ ಅತಿ ಕಡಿಮೆ ದರ ಸೂಚಿಸಿದ M/s. Sumukha Technologies, M.C. Layout, Vijayanagar, Bangalore ಸಂಸ್ಥೆಯು ಈ ಕಾರ್ಯವನ್ನು ಕೈಗೆತ್ತಿಕೊಳ್ಳಲು ರೂ. 13.5 ಲಕ್ಷ ವೆಚ್ಚ ಅಗತ್ಯವಿದೆ (ಅಂದರೆ ಒಂದು ಅಭ್ಯರ್ಥಿಗಳ ಒಂದು Index Card ಅನ್ನು ಗಣಕಕ್ಕೆ ದಾಖಲಾತಿ ಮಾಡಲು ರೂ. 1.80 ರಂತೆ ಸುಮಾರು 7.5 ಲಕ್ಷ Index Card ಗಳನ್ನು ಡಾಟಾ ಎಂಟ್ರಿ ಮಾಡಲು ರೂ. 13.5 ಲಕ್ಷಗಳ ವೆಚ್ಚ) ಆದುದರಿಂದ ಈ ಪ್ರಸ್ತಾವನೆಗೆ ಅಗತ್ಯವಿರುವ ಅನುದಾನವನ್ನು ಬಿಡುಗಡೆ ಮಾಡಲು ಹಾಗೂ ಈ ಬಗ್ಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಉದ್ಯೋಗ ಮತ್ತು ತರಬೇತಿ ಇಲಾಖೆಯ ಆಯುಕ್ತರು ಸರ್ಕಾರವನ್ನು ಕೋರಿದ್ದಾರೆ. ಅಲ್ಲದೆ ಈ ಪ್ರಸ್ತಾವನೆಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2230–02–101–0–01 ಉಪ ಶೀರ್ಷಿಕೆ –051 (ಯೋಜನೆ) ಇತರೆ ವೆಚ್ಚಗಳು" ಅಡಿ ಭರಿಸುವುದಾಗಿ ತಿಳಿಸಿದ್ದಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 41 ಇಟಿಎಕ್ಸ್ 2007, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2007**

ಉದ್ಯೋಗ ಮತ್ತು ತರಬೇತಿ ಇಲಾಖೆಯ ಕೆಳಕಂಡ 20 ಉದ್ಯೋಗ ವಿನಿಮಯ ಕೇಂದ್ರಗಳ 7.5 ಲಕ್ಷ ಇಂಡೆಕ್ಸ್ ಕಾರ್ಡ್‌ಗಳನ್ನು ಡಾಟಾ ಎಂಟ್ರಿ ಮಾಡಲು, ಒಂದು ಇಂಡೆಕ್ಸ್ ಕಾರ್ಡ್‌ಗೆ ರೂ. 1.80 ರಂತೆ ಒಟ್ಟು ರೂ. 13.5 ಲಕ್ಷ (ಹದಿಮೂರು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ)ಗಳ ವೆಚ್ಚದಲ್ಲಿ ಕಾರ್ಯಗತಗೊಳಿಸಲು M/s. Sumukha Technologies, M.C. Layout, Vijayanagar, Bangalore ರವರಿಗೆ ವಹಿಸಲು ಮಂಜೂರಾತಿ ನೀಡಲಾಗಿದೆ.

| | | | | | |
|---|---|---|---|---|---|
| 1 | ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು | 2 | ಜಿಲ್ಲಾ ಉದ್ಯೋಗ, ವಿನಿಮಯ ಕೇಂದ್ರ, ತುಮಕೂರು | 3 | ಜಿಲ್ಲಾ ಉದ್ಯೋಗ, ವಿನಿಮಯ ಕೇಂದ್ರ, ಚಾಮರಾಜನಗರ |
| 4 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಿತ್ರದುರ್ಗಾ | 5 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಿಜಾಪುರ | 6 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಳ್ಳಾರಿ |
| 7 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ರಾಯಚೂರು | 8 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಕೊಪ್ಪಳ | 9 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೀದರ್ |
| 10 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹಾವೇರಿ | 11 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಾಗಲಕೋಟೆ | 12 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೆಳಗಾಂ |
| 13 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಗುಲ್ಬರ್ಗಾ | 14 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಕೋಲಾರ | 15 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹಾಸನ |
| 16 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮೈಸೂರು | 17 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಶಿವಮೊಗ್ಗ | 18 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಉಡುಪಿ |
| 19 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ದಾವಣಗೆರೆ | 20 | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಕಾರವಾರ | | |

ಸದರಿ ವೆಚ್ಚವನ್ನು ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದ 2007-08ನೇ ಸಾಲಿನ ಸಾಮಾನ್ಯ ಉದ್ಯೋಗ ವಿನಿಮಯ ಕೇಂದ್ರಗಳ ಯೋಜನೆ ಲೆಕ್ಕಶೀರ್ಷಿಕೆ "2230-02-101-0-01-051 (ಯೋಜನೆ)" ಯಲ್ಲಿ ಲಭ್ಯವಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಪ್ರಸ್ತಾವನೆಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ ಮತ್ತು ನಿಯಮಗಳನುಸಾರ ನಿರ್ವಹಿಸಬೇಕೆಂಬುದರ ಷರತ್ತಿಗೊಳಪಟ್ಟು ಈ ಮಂಜೂರಾತಿಯನ್ನು ನೀಡಲಾಗಿದೆ.

ಇದನ್ನು ಆಂತರಿಕ ಆರ್ಥಿಕ ಸಲಹೆಗಾರರು, ಸಮಾಜ ಕಲ್ಯಾಣ, ಕಾರ್ಮಿಕ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಕಕಾ 194 ಆಂಆಸ 2007, ದಿ: 23-10-2007 ಮತ್ತು 25-10-2007ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಮತ್ತು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 21 ಟಿಎಫ್‌ಪಿ 2006, ದಿನಾಂಕ: 2-9-2006ರ ಪ್ರತ್ಯಾಯೋಜಿತ ಅಧಿಕಾರಗಳೊಂದಿಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1977

**ಅಬ್ದುಲ್ ರೆಹಮಾನ್**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ

(ಉದ್ಯೋಗ ಮತ್ತು ತರಬೇತಿ)

**ವಿಷಯ :** 2007-08ನೇ ಸಾಲಿನಲ್ಲಿ ರಾಜ್ಯದ ಅತಿ ಹೆಚ್ಚು ಹಿಂದುಳಿದ ತಾಲ್ಲೂಕುಗಳಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಸ್ಥಾಪನೆ ಬಗ್ಗೆ.

**ಓದಲಾಗಿದೆ :**
1) ಪತ್ರ ಸಂಖ್ಯೆ: ಉತನಿ/ತ/ಯೋ-1/ವಿವ-11/2007-08, ದಿ: 16-4-2007.
2) ಟಿಪ್ಪಣಿ ಸಂಖ್ಯೆ: ಸಿಎಂ/ಎಸ್‌ಸಿಎಮ್-2/1139/2007, ದಿ: 2-5-2007.
3) ಸರ್ಕಾರದ ಆದೇಶ ಸಂಖ್ಯೆ: ಕಾ.ಇ. 141 ಇಟಿಐ 2007, ದಿ: 2-8-2007.
4) ಪತ್ರ ಸಂಖ್ಯೆ: ಉತನಿ/ತ/ಯೋ-1/ವಿವ-11/2007, ದಿ: 16-8-2007.

**ಪ್ರಸ್ತಾವನೆ :**

ಪ್ರಾದೇಶಿಕ ಅಸಮತೋಲನತೆ ನೀಗಿಸಲು ರಾಜ್ಯದ ಅತಿ ಹಿಂದುಳಿದ ತಾಲ್ಲೂಕುಗಳಲ್ಲಿ ವಿಶೇಷ ಅಭಿವೃದ್ಧಿ ಯೋಜನೆಯಡಿಯಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸುವುದಾಗಿ 2007-08ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಲಾಗಿತ್ತು.

ಆಯುಕ್ತರು, ಉದ್ಯೋಗ ಮತ್ತು ತರಬೇತಿ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ರಾಜ್ಯದ ಅತಿ ಹಿಂದುಳಿದ ತಾಲ್ಲೂಕುಗಳ ಪೈಕಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳು ಈಗಾಗಲೇ ಇಲ್ಲದಿರುವ ತಾಲ್ಲೂಕುಗಳಲ್ಲಿ ಹತ್ತು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಸ್ಥಾಪಿಸಿ ಅವುಗಳಿಗೆ ಅವಶ್ಯಕ ಹುದ್ದೆಗಳನ್ನು ಸೃಜಿಸುವಂತೆ, ವೃತ್ತಿಗಳನ್ನು ಮಂಜೂರು ಮಾಡುವಂತೆ ಹಾಗೂ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ದಿ: 2-5-2007ರಂದು ಜರುಗಿದ ಸಭೆಯಲ್ಲಿನ ತೀರ್ಮಾನದಂತೆ ಡಾ॥ ಡಿ.ಎಂ. ನಂಜುಂಡಪ್ಪ ವರದಿ ಅನುಷ್ಠಾನಗೊಳಿಸಲು 2007-08ನೇ ಸಾಲಿನಲ್ಲಿ ವಿಶೇಷ ಅಭಿವೃದ್ಧಿ ಯೋಜನೆಯಡಿಯಲ್ಲಿ ಹಿಂದುಳಿದ ಪ್ರದೇಶಗಳಲ್ಲಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಹೆಚ್ಚಿನ ಬೇಡಿಕೆ ಇರುವುದರಿಂದ ಪ್ರಾದೇಶಿಕ ಅಸಮತೋಲನಾ ಯೋಜನೆಯಡಿಯಲ್ಲಿ 10 ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಸ್ಥಾಪಿಸಲು ತೀರ್ಮಾನಿಸಿ ಸದ್ಯಕ್ಕೆ ಅಫ್ಜಲ್‌ಪುರ, ಹಿರಿಯೂರು, ಮುಳಬಾಗಿಲು, ದೇವದುರ್ಗ, ನಾಗಮಂಗಲ, ಬೇಲೂರು, ಶ್ರೀರಂಗಪಟ್ಟಣ ಮತ್ತು ಬಸವಕಲ್ಯಾಣಗಳಲ್ಲಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಲು ಉಲ್ಲೇಖಿತ (3)ರ ಸರ್ಕಾರಿ ಆದೇಶದಲ್ಲಿ ಅನುಮತಿ ನೀಡಲಾಗಿದೆ.

ಅಲ್ಲದೆ ಮೇಲ್ಕಂಡ 08 ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಅಂದರೆ ಪ್ರತಿಯೊಂದು ಐಟಿಐ ಗೆ ಹುದ್ದೆಗಳನ್ನು ಸೃಜಿಸಲು ಹಾಗೂ ಕೆಳಕಂಡ 06 ವೃತ್ತಿಗಳನ್ನು ಮಂಜೂರು ಮಾಡುವಂತೆಯು ಆಯುಕ್ತರು ಉಲ್ಲೇಖ (4)ರಲ್ಲಿ ಓದಲಾದ ಪತ್ರದಲ್ಲಿ ಮತ್ತೊಮ್ಮೆ ಕೋರಿದ್ದಾರೆ.

| ಕ್ರ.ಸಂ. | ಪ್ರತೀ ಸಂಸ್ಥೆಯಲ್ಲಿ ಪ್ರಾರಂಭಿಸಲಾಗುವ ವೃತ್ತಿಗಳು |
|---|---|
| 1) | ಎಲೆಕ್ಟ್ರೀಷಿಯನ್ |
| 2) | ಎಲೆಕ್ಟ್ರಾನಿಕ್-ಮೆಕಾನಿಕ್ |
| 3) | ಫಿಟ್ಟರ್ |
| 4) | ಟರ್ನರ್ |
| 5) | ಎಂ.ಎಂ.ವಿ. |
| 6) | ಎಂ.ಆರ್.ಎ.ಸಿ. |

ವಿಷಯವನ್ನು ಪರಿಶೀಲಿಸಿದ ನಂತರ ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ವೃತ್ತಿಗಳನ್ನು ಮಂಜೂರಾತಿ ನೀಡುವ ಬಗ್ಗೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 376 ಇಟಿಐ 2007(ಭಾಗ), ಬೆಂಗಳೂರು, ದಿನಾಂಕ: 5ನೇ ನವೆಂಬರ್ 2007**

ರಾಜ್ಯದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯಡಿ 2007–08ನೇ ಸಾಲಿನಲ್ಲಿ ಹೊಸದಾಗಿ ಸ್ಥಾಪಿಸಲ್ಪಟ್ಟಿರುವ ಮೇಲ್ಕಂಡ 08 ಅತೀ ಹಿಂದುಳಿದ ತಾಲ್ಲೂಕುಗಳಲ್ಲಿ ಸ್ಥಾಪಿಸಲಾದ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಸದ್ಯಕ್ಕೆ ಕೆಳಕಂಡ 05 ವೃತ್ತಿಗಳನ್ನು ಪ್ರಾರಂಭಿಸಲು ಮೇಲೆ (1)ರಲ್ಲಿ ಓದಲಾದ ಪ್ರಸ್ತಾವನೆಯನ್ನು ಪರಿಗಣಿಸಿ ಮಂಜೂರಾತಿಯನ್ನು ನೀಡಲಾಗಿದೆ.

| ಕ್ರ.ಸಂ. | ಪ್ರತೀ ಸಂಸ್ಥೆಯಲ್ಲಿ ಪ್ರಾರಂಭಿಸಲಾಗುವ ವೃತ್ತಿಗಳು |
|---|---|
| 1) | ಎಲೆಕ್ಟ್ರೀಷಿಯನ್ |
| 2) | ಎಲೆಕ್ಟ್ರಾನಿಕ್–ಮೆಕಾನಿಕ್ |
| 3) | ಫಿಟ್ಟರ್ |
| 4) | ಟರ್ನರ್ |
| 5) | ಎಂ.ಎಂ.ವಿ. |

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1978

**ಅಬ್ದುಲ್ ರೆಹಮಾನ್**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ
(ಉದ್ಯೋಗ ಮತ್ತು ತರಬೇತಿ)

## ಲೋಕೋಪಯೋಗಿ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ, ಇವರ ಪತ್ರ ಸಂಖ್ಯೆ: ಸಿಬಿಎನ್:ಹೈಆ್ಯಸ:ರಸ್ತೆ: ಮೇಲ್ದರ್ಜೆ:ಕಸಂ–7/03 ಗ್ರಾರಮೆ:ಹಾವೇರಿ: 07–08, ದಿ: 4–8–2007.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರು ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ತುಂಬಾ ದುಸ್ಥಿತಿಯಲ್ಲಿದ್ದು ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದುದರಿಂದ ಈ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ಕೋಡ ಅಣಜಿ ರಸ್ತೆ | 32.00 |
| 2 | ದೂದಿಹಳ್ಳಿ ರಟ್ಟಿಹಳ್ಳಿ ರಸ್ತೆ | 10.00 |
| 3 | ಹಂಸಭಾವಿ ಬಿಸಲಳ್ಳಿ ರಸ್ತೆ | 11.00 |
| 4 | ಹಿರೇಮತ್ತೂರದಿಂದ ಬಾಗಲಕೋಟೆ ಬೆಳಗಿರಿ ರಂಗನಬೆಟ್ಟ ವಯಾ ತಿಮ್ಲಾಪುರ | 14.00 |
| 5 | ಚಿಕ್ಕೆರೂರುದಿಂದ ಜಾವಳ್ಳಿ ರಸ್ತೆ | 6.30 |
| 6 | ಹಂಸಭಾವಿ ಸಾತೇನಹಳ್ಳಿ ರಸ್ತೆ | 6.00 |
| 7 | ಬಿರೂರು–ಸಮ್ಮಸಗಿ ರಾಜ್ಯ ಹೆದ್ದಾರಿಯಿಂದ ಬ್ಯಾಡಗಿ – ರಟ್ಟಿಹಳ್ಳಿ ಕೂಡು ರಸ್ತೆ, (ವಯಾ ಆಲದಗೇರಿ) | 8.00 |
| 8 | ಬಿರೂರು – ಸಮ್ಮಸಗಿ ರಾಜ್ಯ ಹೆದ್ದಾರಿಯಿಂದ ಎಮ್ಮಿಗನೂರಿಗೆ ಕೂಡುವ ರಸ್ತೆ, (ವಯಾ ಕಚವಿ–ಪುರಪುಂಡಿಕೊಪ್ಪ) | 9.00 |
| 9 | ರಟ್ಟಿಹಳ್ಳಿಯಿಂದ ಬಾಗಲಕೋಟ ಬಳಿಗಿರಿ ರಂಗನಬೆಟ್ಟ ಕೂಡು ರಸ್ತೆ, ವಯಾ ಕುಡಪಲಿ ಕೂಲಿ ರಸ್ತೆ | 13.00 |
| 10 | ಚಿಕ್ಕೆರೂರು ಯಡ್ಗೂರು ರಸ್ತೆ | 9.00 |
| | **ಒಟ್ಟು** | **118.30** |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 392 ಸಿಆರ್‌ಎಂ 2007, ಬೆಂಗಳೂರು, ದಿನಾಂಕ: 4ನೇ ಅಕ್ಟೋಬರ್ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ 10 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ಕೋಡ ಅಣಜಿ ರಸ್ತೆ | 32.00 |
| 2 | ದೂದಿಹಳ್ಳಿ ರಟ್ಟಿಹಳ್ಳಿ ರಸ್ತೆ | 10.00 |
| 3 | ಹಂಸಭಾವಿ ಬಿಸಲಳ್ಳಿ ರಸ್ತೆ | 11.00 |
| 4 | ಹಿರೇಮತ್ತೂರದಿಂದ ಬಾಗಲಕೋಟೆ ಬೆಳಗಿರಿ ರಂಗನಬೆಟ್ಟ ವಯಾ ತಿಮ್ಲಾಪುರ | 14.00 |
| 5 | ಚಿಕ್ಕೆರೂರುದಿಂದ ಜಾವಳ್ಳಿ ರಸ್ತೆ | 6.30 |
| 6 | ಹಂಸಭಾವಿ ಸಾತೇನಹಳ್ಳಿ ರಸ್ತೆ | 6.00 |
| 7 | ಬಿರೂರು–ಸಮ್ಮಸಗಿ ರಾಜ್ಯ ಹೆದ್ದಾರಿಯಿಂದ ಬ್ಯಾಡಗಿ – ರಟ್ಟಿಹಳ್ಳಿ ಕೂಡು ರಸ್ತೆ, (ವಯಾ ಆಲದಗೇರಿ) | 8.00 |
| 8 | ಬಿರೂರು – ಸಮ್ಮಸಗಿ ರಾಜ್ಯ ಹೆದ್ದಾರಿಯಿಂದ ಎಮ್ಮಿಗನೂರಿಗೆ ಕೂಡುವ ರಸ್ತೆ, (ವಯಾ ಕಚವಿ–ಪುರಪುಂಡಿಕೊಪ್ಪ) | 9.00 |
| 9 | ರಟ್ಟಿಹಳ್ಳಿಯಿಂದ ಬಾಗಲಕೋಟ ಬಳಿಗಿರಿ ರಂಗನಬೆಟ್ಟ ಕೂಡು ರಸ್ತೆ, ವಯಾ ಕುಡಪಲಿ ಕೂಲಿ ರಸ್ತೆ | 13.00 |
| 10 | ಚಿಕ್ಕೆರೂರು ಯಡ್ಲೂರು ರಸ್ತೆ | 9.00 |
| | **ಒಟ್ಟು** | **118.30** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

**ವಿಷಯ :** ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ಮತ್ತು ಸಿರಾ ತಾಲ್ಲೂಕುಗಳ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ರಶಾ:ಮೇಲ್ದರ್ಜೆ:ಸಇಂ–2/2007–08, ದಿ: 6–8–2007.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ಹಾಗೂ ಸಿರಾ ತಾಲ್ಲೂಕುಗಳ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ತುಂಬಾ ದುಸ್ಥಿತಿಯಲ್ಲಿದ್ದು ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದುದರಿಂದ ಈ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ಎನ್.ಎಸ್. ರಸ್ತೆಯಿಂದ ತರೂರು, ಜುಂಜಪ್ಪನ ದೇವಸ್ಥಾನದ ಮೂಲಕ ಕೊರಟಗೆರೆ ಗಡಿ ಸೇರುವ ರಸ್ತೆ. | 25.00 |
| 2 | ಎನ್.ಎಸ್. ರಸ್ತೆಯಿಂದ ಮಾರಗೊಂಡನಹಳ್ಳಿ, ರಾಮಲಿಂಗನಪುರ ಮಾರ್ಗ ಟಿ.ಸಿ.ಬಿ. ರಸ್ತೆಗೆ ಸೇರುವ ರಸ್ತೆ | 20.00 |
| 3 | ಎನ್.ಎಸ್. ರಸ್ತೆಯಿಂದ ಕುಂಟರಾಮನಹಳ್ಳಿ ಸೇರುವ ರಸ್ತೆ | 13.00 |
| 4 | ಟಿ.ಸಿ.ಬಿ. ರಸ್ತೆಯಿಂದ ನಿಂಬೆಮರದಹಳ್ಳಿ ಮಾರ್ಗ ರಾ.ಹೆ. 4ನ್ನು ಸೇರುವ ರಸ್ತೆ | 25.00 |

| | | |
|---|---|---|
| 5 | ರಾ.ಹೆ. 4 ರಿಂದ ಸ್ಟೀಲ್ ಫ್ಯಾಕ್ಟರಿ ಮುಖಾಂತರ ಹಾಲದೊಡ್ಡೇರಿ ಸಂಪರ್ಕಿಸುವ ರಸ್ತೆ | 11.00 |
| 6 | ಕಲ್ಲೇನಹಳ್ಳಿಯಿಂದ ದಬ್ಬಗುಂಟೆ ಮಾರ್ಗ ದಸೂಡಿ ಸಂಪರ್ಕಿಸುವ ರಸ್ತೆ | 11.50 |
| 7 | ಹೊಯ್ಸಳ ಕಟ್ಟೆಯಿಂದ ಪಿಳಾಲಿ ರಸ್ತೆ | 13.60 |
| 8 | ಆಂಧ್ರಗಡಿಯಿಂದ ಕರೆಕ್ಯಾತನಹಳ್ಳಿ – ಬಸವನಹಳ್ಳಿ ಮಾರ್ಗ ಕಾರೇಹಳ್ಳಿ ಸಂಪರ್ಕಿಸುವ ರಸ್ತೆ | 30.00 |
| 9 | ಹರಿಯಜ್ಜಿ ಹಳ್ಳಿಯಿಂದ ಗೋಣಿಹಳ್ಳಿ ಮಾರ್ಗ ಹಾರೋಗೆರೆ ರಸ್ತೆ | 13.00 |
| | ಒಟ್ಟು | 162.10 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 392 ಸಿಆರ್‌ಎಂ 2007, ಬೆಂಗಳೂರು, ದಿನಾಂಕ: 4ನೇ ಅಕ್ಟೋಬರ್ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ಎನ್.ಎಸ್. ರಸ್ತೆಯಿಂದ ತರೂರು, ಜುಂಜಪ್ಪನ ದೇವಸ್ಥಾನದ ಮೂಲಕ ಕೊರಟಗೆರೆ ಗಡಿ ಸೇರುವ ರಸ್ತೆ. | 25.00 |
| 2 | ಎನ್.ಎಸ್. ರಸ್ತೆಯಿಂದ ಮಾರಗೊಂಡನಹಳ್ಳಿ, ರಾಮಲಿಂಗನಪುರ ಮಾರ್ಗ ಟಿ.ಸಿ.ಬಿ. ರಸ್ತೆಗೆ ಸೇರುವ ರಸ್ತೆ | 20.00 |
| 3 | ಎನ್.ಎಸ್. ರಸ್ತೆಯಿಂದ ಕುಂಟರಾಮನಹಳ್ಳಿ ಸೇರುವ ರಸ್ತೆ | 13.00 |
| 4 | ಟಿ.ಸಿ.ಬಿ. ರಸ್ತೆಯಿಂದ ನಿಂಬೆಮರದಹಳ್ಳಿ ಮಾರ್ಗ ರಾ.ಹೆ. 4ನ್ನು ಸೇರುವ ರಸ್ತೆ | 25.00 |
| 5 | ರಾ.ಹೆ. 4 ರಿಂದ ಸ್ಟೀಲ್ ಫ್ಯಾಕ್ಟರಿ ಮುಖಾಂತರ ಹಾಲದೊಡ್ಡೇರಿ ಸಂಪರ್ಕಿಸುವ ರಸ್ತೆ | 11.00 |
| 6 | ಕಲ್ಲೇನಹಳ್ಳಿಯಿಂದ ದಬ್ಬಗುಂಟೆ ಮಾರ್ಗ ದಸೂಡಿ ಸಂಪರ್ಕಿಸುವ ರಸ್ತೆ | 11.50 |
| 7 | ಹೊಯ್ಸಳ ಕಟ್ಟೆಯಿಂದ ಪಿಳಾಲಿ ರಸ್ತೆ | 13.60 |
| 8 | ಆಂಧ್ರಗಡಿಯಿಂದ ಕರೆಕ್ಯಾತನಹಳ್ಳಿ – ಬಸವನಹಳ್ಳಿ ಮಾರ್ಗ ಕಾರೇಹಳ್ಳಿ ಸಂಪರ್ಕಿಸುವ ರಸ್ತೆ | 30.00 |
| 9 | ಹರಿಯಜ್ಜಿ ಹಳ್ಳಿಯಿಂದ ಗೋಣಿಹಳ್ಳಿ ಮಾರ್ಗ ಹಾರೋಗೆರೆ ರಸ್ತೆ | 13.00 |
| | ಒಟ್ಟು | 162.10 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

**ವಿಷಯ :** ಕುಂದಾಪುರ ತಾಲ್ಲೂಕು ಬೈಂದೂರು ವಿಧಾನಸಭಾ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ರಶಾ:ಸಇಂ.4:ಮೇಲ್ದರ್ಜೆ:2007–08, ದಿ: 23–8–2007.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಕುಂದಾಪುರ ತಾಲ್ಲೂಕು ಬೈಂದೂರು ವಿಧಾನಸಭಾ ಕ್ಷೇತ್ರದ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಯು ತುಂಬಾ ದುಸ್ಥಿತಿಯಲ್ಲಿದ್ದು ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದುದರಿಂದ ಈ ಗ್ರಾಮೀಣ ರಸ್ತೆಯನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ಉಪ್ಪಿನಕುದ್ರು – ತಲ್ಲೂರು ರಸ್ತೆ | 4.50 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 392 ಸಿಆರ್‌ಎಂ 2007, ಬೆಂಗಳೂರು, ದಿನಾಂಕ: 4ನೇ ಅಕ್ಟೋಬರ್ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ಉಪ್ಪಿನಕುದ್ರು – ತಲ್ಲೂರು ರಸ್ತೆ | 4.50 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1849

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ

(ಸಂಪರ್ಕ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀಮತಿ ಎಂ.ವಿ. ಸಾವಿತ್ರಿ, ಕೆ.ಎ.ಎಸ್. (ಸೂಪರ್ ಟೈಂ ಶ್ರೇಣಿ) ಅಧಿಕಾರಿ, ಹಾಲಿ ರಿಜಿಸ್ಟ್ರಾರ್, ನಿಮ್ಹಾನ್ಸ್, ಬೆಂಗಳೂರು ಇವರ ನಿಯೋಜನೆ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 82 ಆಸೇವ 04 ದಿನಾಂಕ: 6–11–2004.
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 195 ಆಸೇಇ 05 ದಿನಾಂಕ 16–6–2005.
3) ನಿರ್ದೇಶಕರು, ನಿಮ್ಹಾನ್ಸ್, ಬೆಂಗಳೂರು ಇವರ ಪತ್ರ ಸಂಖ್ಯೆ: NIMH/PER(5)MVS/2007-08, ದಿನಾಂಕ: 5–10–2007.

**ಪ್ರಸ್ತಾವನೆ :**

ಶ್ರೀಮತಿ ಎಂ.ವಿ. ಸಾವಿತ್ರಿ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಇವರು ನಿಯೋಜನೆ ಮೇಲೆ ನಿಮ್ಹಾನ್ಸ್, ಬೆಂಗಳೂರು ಇಲ್ಲಿ ರಿಜಿಸ್ಟ್ರಾರ್ ಆಗಿ ದಿನಾಂಕ: 28–1–2005 ರಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಆದೇಶದಲ್ಲಿ ಇವರ ನಿಯೋಜನೆ ಷರತ್ತುಗಳನ್ನು 3 ವರ್ಷಗಳ ಅವಧಿಗೆ ಹೊರಡಿಸಲಾಗಿದೆ. ನಿರ್ದೇಶಕರು, ನಿಮ್ಹಾನ್ಸ್, ಬೆಂಗಳೂರು ಇವರು ಶ್ರೀಮತಿ ಎಂ.ವಿ. ಸಾವಿತ್ರಿಯವರ ನಿಯೋಜನೆ ಅವಧಿಯು ಜನವರಿ 2008ಕ್ಕೆ ಅಂತ್ಯಗೊಳ್ಳಲಿದ್ದು ಇವರ ಸೇವೆಯು ಸಂಸ್ಥೆಗೆ ಅವಶ್ಯಕವಿದ್ದು ಇವರ ನಿಯೋಜನಾ ಅವಧಿಯನ್ನು ಮತ್ತು ಎರಡು ವರ್ಷಗಳವರೆಗೆ ಮುಂದುವರಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕೋರಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 382 ಆಸೇಇ 2007, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀಮತಿ ಎಂ.ವಿ. ಸಾವಿತ್ರಿ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ, ಹಾಲಿ ರಿಜಿಸ್ಟ್ರಾರ್, ನಿಮ್ಹಾನ್ಸ್, ಬೆಂಗಳೂರು ಇವರ ನಿಯೋಜನಾ ಅವಧಿಯನ್ನು ದಿನಾಂಕ: 28–1–2008 ರಿಂದ ಮುಂದಿನ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ದಿನಾಂಕ: 16–6–2005ರ ಆದೇಶದಲ್ಲಿರುವ ನಿಯೋಜನಾ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಂತೆ ಮುಂದುವರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2088

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು–2)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಬಿ. ಶಿವರಾಮೇಗೌಡ, ನಿವೃತ್ತ ಸರ್ಕಾರಿ ಅಭಿಯೋಜಕರು ಇವರನ್ನು ಮಂಡ್ಯದ 2ನೇ ತ್ವರಿತ ವಿಲೇವಾರಿ ನ್ಯಾಯಾಲಯದ ಎಸ್.ಸಿ.ಸಂ: 16/03ರಲ್ಲಿ ಹಾಜರಾಗಲು ಮತ್ತು ಪ್ರಕರಣ ನಡೆಸಲು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಿದ ಸಂಬಂಧ ಸಂಭಾವನೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ ಒಇ 397 ಪಿಪಿಇ 2005, ದಿನಾಂಕ: 1–6–2005.
2) ಸರ್ಕಾರಿ ಆದೇಶ ಸಂಖ್ಯೆ ಒಇ 397 ಪಿಪಿಇ 2005, ದಿನಾಂಕ: 27–10–2005.
3) ಸರ್ಕಾರಿ ಆದೇಶ ಸಂಖ್ಯೆ ಒಇ 334 ಪಿಪಿಇ 2006, ದಿನಾಂಕ: 20–3–2007.
4) ಶ್ರೀ ಬಿ. ಶಿವರಾಮೇಗೌಡ ಇವರು ವಿಶೇಷ ಸರ್ಕಾರಿ ಅಭಿಯೋಜಕರು ಇವರು ಸಲ್ಲಿಸಿದ ಬಿಲ್ಲು ದಿನಾಂಕ: 22–3–07.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ: 1–6–05ರ ಸರ್ಕಾರದ ಅಧಿಸೂಚನೆಯಲ್ಲಿ ಶ್ರೀ. ಬಿ. ಶಿವರಾಮೇಗೌಡ, ನಿವೃತ್ತ ಸರ್ಕಾರಿ ಅಭಿಯೋಜಕರು ಇವರನ್ನು ಮಂಡ್ಯದ 2ನೇ ತ್ವರಿತ ವಿಲೇವಾರಿ ನ್ಯಾಯಾಲಯದ ಎಸ್.ಸಿ.ಸಂ: 16/2003ರಲ್ಲಿ ರಾಜ್ಯದ ಪರವಾಗಿ ಪ್ರಕರಣ ನಡೆಸಲು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ: 27–10–05ರ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಪ್ರಕರಣವನ್ನು ನಡೆಸಲು ಕೆಳಕಂಡಂತೆ ಸಂಭಾವನೆಯನ್ನು ನಿಗದಿಗೊಳಿಸಲಾಗಿತ್ತು.

| | | |
|---|---|---|
| 1 | ರೀಡಿಂಗ್ ಫೀಸ್ | ರೂ. 12,500 |
| 2 | ಪರಿಣಾಮಕಾರಿ ವಿಚಾರಣೆ (ಎಫೆಕ್ಟೀವ್ ಹಿಯರಿಂಗ್) | ರೂ. 1,500 |
| 3 | ಪರಿಣಾಮಕಾರಿಯಲ್ಲದ ವಿಚಾರಣೆ (ನಾನ್ ಎಫೆಕ್ಟೀವ್ ಹಿಯರಿಂಗ್) | ರೂ. 500 |

ಮೇಲೆ (3)ರಲ್ಲಿ ಓದಲಾಗಿರುವ ದಿನಾಂಕ: 3–7–07ರ ಸರ್ಕಾರದ ಆದೇಶದಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರಿಗೆ ಮಧ್ಯಂತರ ಸಂಭಾವನೆಯನ್ನು ಮಂಜೂರು ಮಾಡಲಾಗಿತ್ತು.

ಮೇಲೆ (4)ರಲ್ಲಿ ಓದಲಾಗಿರುವ ದಿನಾಂಕ: 22–3–07ರ ಪತ್ರದಲ್ಲಿ ಸದರಿ ವಿಶೇಷ ಸರ್ಕಾರಿ ಅಭಿಯೋಜಕರು ಎರಡನೇ ಬಿಲ್ಲನ್ನು ಕೆಳಕಂಡಂತೆ ಮಂಜೂರಾತಿಗಾಗಿ ಸರ್ಕಾರಕ್ಕೆ ಸಲ್ಲಿಸಿದ್ದಾರೆ.

| | | |
|---|---|---|
| 1 | 24 ಪರಿಣಾಮಕಾರಿ ವಿಚಾರಣೆ x 1,500 | ರೂ. 36,000 |
| 2 | 14 ಪರಿಣಾಮಕಾರಿಯಲ್ಲದ ವಿಚಾರಣೆ x 500 | ರೂ. 7,000 |
| | **ಒಟ್ಟು** | **ರೂ. 43,000** |

ಶ್ರೀ ಬಿ. ಶಿವರಾಮೇಗೌಡ, ನಿವೃತ್ತ ಸರ್ಕಾರಿ ಅಭಿಯೋಜಕರು ಮಂಜೂರಾತಿಗಾಗಿ ಎರಡನೇ ಬಿಲ್ಲನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 334 ಪಿಪಿಇ 2006, ಬೆಂಗಳೂರು, ದಿನಾಂಕ: 5ನೇ ಸೆಪ್ಟೆಂಬರ್ 2007**

ಮಂಡ್ಯದ 2ನೇ ತ್ವರಿತ ವಿಲೇವಾರಿ ನ್ಯಾಯಾಲಯದಲ್ಲಿ ದಾಖಲಾಗಿರುವ ಎಸ್.ಸಿ.ಸಂ: 16/03ರಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲಾದ ಶ್ರೀ ಬಿ. ಶಿವರಾಮೇಗೌಡ, ನಿವೃತ್ತ ಸರ್ಕಾರಿ ಅಭಿಯೋಜಕರು ಇವರು ಸಂಭಾವನೆಯ ಎರಡನೇ ಬಿಲ್ಲಿಗೆ ಈ ಕೆಳಕಂಡಂತೆ ಮಂಜೂರಾತಿಯನ್ನು ನೀಡಲಾಗಿದೆ.

| | | |
|---|---|---|
| 1 | 24 ಪರಿಣಾಮಕಾರಿ ವಿಚಾರಣೆ x 1,500 | ರೂ. 36,000 |
| 2 | 14 ಪರಿಣಾಮಕಾರಿಯಲ್ಲದ ವಿಚಾರಣೆ x 500 | ರೂ. 7,000 |
| | **ಒಟ್ಟು** | **ರೂ. 43,000** |

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2014–ನ್ಯಾಯಾಡಳಿತ–114, ಲೀಗಲ್ ಅಡ್ವೈಸರ್ಸ್ ಅಂಡ್ ಕೌನ್ಸಿಲ್ಸ್ –01, ಅಡ್ವೋಕೇಟ್ ಜನರಲ್ (Payment for professional and special service in the budget)" ರಡಿಯಲ್ಲಿ ಭರಿಸತಕ್ಕದ್ದು.

ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 882 ವೆಚ್ಚ–7/05, ದಿನಾಂಕ 14–9–05ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1599

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಒಳಾಡಳಿತ ಇಲಾಖೆ
(ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗಗಳು)

**ಶಿಕ್ಷಣ ಸಚಿವಾಲಯ**

**ವಿಷಯ :** ಹೆಚ್ಚುವರಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲಬರ್ಗಾ ಮತ್ತು ಧಾರವಾಡ ಹುದ್ದೆಗಳನ್ನು ex-cadre ಹುದ್ದೆಗಳನ್ನಾಗಿ ಪರಿಗಣಿಸುವ ಬಗ್ಗೆ.

**ಓದಲಾಗಿದೆ :**
1) ಅಧಿಸೂಚನೆ ಸಂಖ್ಯೆ: ಡಿಪಿಎಆರ್ 55 ಎಸ್‌ಎಎಸ್ 2007, ದಿನಾಂಕ: 16–5–2007
2) ಅನಧಿಕೃತ ಟಿಪ್ಪಣಿ ಸಂಖ್ಯೆ: ಡಿಪಿಎಆರ್ 130 ಎಸ್‌ಎಎಸ್ 2007, ದಿನಾಂಕ: 8–8–2007.
3) ಅನಧಿಕೃತ ಟಿಪ್ಪಣಿ ಸಂಖ್ಯೆ: ಡಿಪಿಎಆರ್ 55 ಎಸ್‌ಎಎಸ್ 2007, ದಿನಾಂಕ: 5–10–2007.

**ಪ್ರಸ್ತಾವನೆ :**

ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಹೆಚ್ಚುವರಿ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮತ್ತು ಹೆಚ್ಚುವರಿ ಆಯುಕ್ತರು, ಗುಲಬರ್ಗಾ ಹುದ್ದೆಗಳನ್ನು ಅಧಿಸೂಚನೆ ಸಂಖ್ಯೆ: ಇಡಿ 163 ಯೋಯೋಕ 2003, ದಿನಾಂಕ: 10–10–2003ರ ಆದೇಶದಲ್ಲಿ ಸೃಜನೆ ಮಾಡಿದ್ದು, ಈ ಹುದ್ದೆಗಳು ಅನುಕ್ರಮವಾಗಿ ಭಾರತೀಯ ಆಡಳಿತ ಸೇವೆಗೆ ಸೇರಿದ ಶ್ರೀ ಎ.ಕೆ. ಮೋನಪ್ಪ ಮತ್ತು ಶ್ರೀ ಜಿ.ಎಲ್ ಚಂದ್ರಶೇಖರಯ್ಯ ರವರುಗಳನ್ನು ಹೆಚ್ಚುವರಿ ಆಯುಕ್ತರನ್ನಾಗಿ ಅನುಕ್ರಮವಾಗಿ ಹುಬ್ಬಳ್ಳಿ–ಧಾರವಾಡ ಮತ್ತು ಗುಲಬರ್ಗಾ ಇಲ್ಲಿಗೆ ನೇಮಕಾತಿ ನೀಡಲಾಗಿದೆ. ಈ ಹುದ್ದೆಗಳಲ್ಲಿ ಎರಡು ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಮೂಲತಃ ಈ ಹುದ್ದೆಗಳು ಭಾರತೀಯ ಆಡಳಿತ ಸೇವೆಗೆ ಸೇರಿದ ಸೂಪರ್ ಟೈಮ್ ವೇತನಕ್ಕೆ ಸಮಾನವಾದ ಹುದ್ದೆಗಳಾಗಿದ್ದು, ಈ ಎರಡು ಅಧಿಕಾರಗಳನ್ನು ನೇಮಕ ಮಾಡಿರುವುದರಿಂದ, ಈಗ ಹಿರಿಯ ಶ್ರೇಣಿಗೆ ಸಮಾನವಾದ ಹುದ್ದೆಯೆಂದು ಗುರುತಿಸಿ, ex-cadre ಹುದ್ದೆಗಳನ್ನಾಗಿ ಪರಿಗಣಿಸಿ ಆದೇಶಿಸುವುದು ಅವಶ್ಯಕವೆಂದು ತಿಳಿಸಿ, ಅದರಂತೆ ಆದೇಶ ಹೊರಡಿಸಲು ಸಿ.ಆ.ಸು. ಇಲಾಖೆಯು ಶಿಕ್ಷಣ ಇಲಾಖೆಯನ್ನು ಕೋರಿದೆ. ಅದರಂತೆ ಸಿ.ಆ.ಸು. ಇಲಾಖೆಯ ಕೋರಿಕೆಯ ಮೇರೆಗೆ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 158 ಡಿಜಿಎಂ 2007, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಸಾರ್ವಜನಿಕ ಶಿಕ್ಷಣ ಇಲಾಖೆಯ ಧಾರವಾಡ ಮತ್ತು ಗುಲಬರ್ಗಾಗಳಲ್ಲಿ ಇರುವ ಹೆಚ್ಚುವರಿ ಆಯುಕ್ತರ ಹುದ್ದೆಗಳನ್ನು ಭಾರತೀಯ ಆಡಳಿತ ಸೇವೆಗೆ ಸೇರಿದ ಸೂಪರ್ ಟೈಮ್ ವೇತನಕ್ಕೆ ಸೇರಿದ ಹುದ್ದೆಗಳಿಗೆ ಬದಲಾಗಿ ಹಿರಿಯ ಶ್ರೇಣಿಗೆ ಸೇರಿದ ಭಾರತೀಯ ಆಡಳಿತ ಸೇವೆಗೆ ಸೇರಿದ ಹುದ್ದೆಗಳನ್ನಾಗಿ ex-cadre ಹುದ್ದೆಗಳೆಂದು ಗುರುತಿಸಿ, ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಈ ಹುದ್ದೆಯನ್ನು ದಿನಾಂಕ: 22–3–2007 ರಿಂದ ಜಾರಿಗೆ ಬರುವಂತೆ ಹಾಗೂ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲಬರ್ಗಾ ಈ ಹುದ್ದೆಯನ್ನು ದಿನಾಂಕ 16–5–2007 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವೃಂದೇತರ ಹುದ್ದೆಗಳೆಂದು ಪರಿಗಣಿಸಿ ಆದೇಶಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2019

**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು 1,2)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** ಬಿಜಾಪುರ ಜಿಲ್ಲೆ, ಬಿಜಾಪುರ ತಾಲ್ಲೂಕು ಯತ್ನಾಳ ಹತ್ತಿರ ಸೇತುವೆ ಸಹಿತ ಬ್ಯಾರೇಜ್ ನಿರ್ಮಾಣ ಕಾಮಗಾರಿಯಲ್ಲಿ ಆಗಿರುವ ಇ.ಐ.ಆರ್.ಎಲ್. ಹಾಗೂ ವರ್ಕ್‌ಸ್ಲಿಪ್‌ಗೆ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :**
1) ಸರ್ಕಾರದ ದಿನಾಂಕ 25–5–2006ರ ಆದೇಶ ಸಂಖ್ಯೆ: ಸನೀಇ 68 ನಯೋಕಾ 2006
2) ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 22–8–2007ರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–9/ಯತ್ನಾಳ ಬ್ಯಾರೇಜ್/2007–08/6718.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 25–5–2006ರ ಸರ್ಕಾರದ ಆದೇಶದಲ್ಲಿ ಬಿಜಾಪುರ ತಾಲ್ಲೂಕಿನ ಯತ್ನಾಳ ಹತ್ತಿರ ಸೇತುವೆಯನ್ನೊಳಗೊಂಡ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 142.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ. 2006–07ನೇ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತ ರೂ. 1,64,11,792–00ಗಳ ಮೇಲೆ ಶೇ. 13.9ರಷ್ಟು ಹೆಚ್ಚುವರಿ ಮೊತ್ತಕ್ಕೆ ಅಂದರೆ ರೂ. 1,86,93,031–00ಗಳಿಗೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ವಹಿಸಲಾಗಿತ್ತು.

2) ಕಾಮಗಾರಿಯು ಜಾರಿಯಲ್ಲಿದ್ದ ಸಂದರ್ಭದಲ್ಲಿ ಮುಖ್ಯ ಇಂಜಿನಿಯರ್‌ರವರು ಸ್ಥಳ ಪರಿವೀಕ್ಷಣೆ ಮಾಡಿ ನೀಡಿದ ಸೂಚನೆಯಂತೆ ಟೆಂಡರ್‌ನಲ್ಲಿ ನಿಗದಿಪಡಿಸಿದ್ದಕ್ಕಿಂತ ಹೆಚ್ಚುವರಿ ಪರಿಮಾಣಗಳನ್ನು ಹಾಗೂ ಕೆಲವು ಕೆಲಸಗಳನ್ನು ಹೆಚ್ಚುವರಿಯಾಗಿ ಗುತ್ತಿಗೆದಾರರು ನಿರ್ವಹಿಸಿದ್ದು ಈ ಬಗ್ಗೆ ಉಂಟಾಗಿರುವ ಹೆಚ್ಚುವರಿ ವೆಚ್ಚದ ಬಗ್ಗೆ ರೂ. 2,92,719–00 ಗಳ ಇ.ಐ.ಆರ್.ಎಲ್. ಮತ್ತು ರೂ. 39,69,219–00ಗಳ ವರ್ಕ್‌ಸ್ಲಿಪ್‌ಗಳನ್ನು ತಯಾರಿಸಿದ್ದು, ಒಟ್ಟಾರೆ ರೂ. 42,61,938–00ಗಳ ಹೆಚ್ಚಿನ ಆರ್ಥಿಕ ಹೊರೆಗೆ ಅನುಮೋದನೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಮೊತ್ತವನ್ನು ಮಂಜೂರಾದ ಅಂದಾಜು ಮೊತ್ತಕ್ಕೆ ಹೋಲಿಸಿದಾಗ ಶೇ. 30.01ರಷ್ಟು ಹೆಚ್ಚುವರಿಯಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 140 ಅಪಿಬಂ 2007, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ, ಬಿಜಾಪುರ ತಾಲ್ಲೂಕು ಯತ್ನಾಳ ಹತ್ತಿರ ಸೇತುವೆ ಸಹಿತ ಬ್ಯಾರೇಜ್ ನಿರ್ಮಾಣ ಕಾಮಗಾರಿಯಲ್ಲಿ ನಿರ್ವಹಿಸಲಾಗಿರುವ ಇ.ಐ.ಆರ್.ಎಲ್. ಹಾಗೂ ವರ್ಕ್‌ಸ್ಲಿಪ್‌ನ ಒಳಗೊಂಡ ಒಟ್ಟು ಮೊತ್ತ ರೂ. 42,61,938–00ಗಳ (ನಲವತ್ತೆರಡು ಲಕ್ಷದ ಅರವತ್ತೊಂದು ಸಾವಿರದ ಒಂಭೈನೂರ ಮೂವತ್ತೆಂಟು ರೂ.ಗಳು ಮಾತ್ರ) ಹೆಚ್ಚಿನ ಆರ್ಥಿಕ ಹೊರೆಗೆ ಸರ್ಕಾರವು ಅನುಮೋದನೆ ನೀಡಿದೆ.

2) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ 952 ಆಕೋ–1/07, ದಿನಾಂಕ: 7–11–2007ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2018

**ಕೆ. ಸುಧಾಕರಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಒಳಾಡಳಿತ ಸಚಿವಾಲಯ**

**ವಿಷಯ :** ಪೊಲೀಸ್ ಪಡೆ ಆಧುನೀಕರಣ ಯೋಜನೆ ಅಡಿಯಲ್ಲಿ ಕೇಂದ್ರ ಸರ್ಕಾರದಿಂದ ಬಿಡುಗಡೆಯಾಗಿರುವ ಅನುದಾನದ ಬಗ್ಗೆ.

**ಓದಲಾಗಿದೆ :** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ: 1:ಎಡಿಜಿಪಿ:ಟಿಟಿಎಂ: ಎಂಡಿಎನ್:2007, ದಿನಾಂಕ: 9–10–2007.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 9–10–2007ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: VI:21011/29/2007-PM-I, ದಿನಾಂಕ: 9–10–2007ರಲ್ಲಿ ಪೊಲೀಸ್ ಪಡೆ ಆಧುನೀಕರಣ ಯೋಜನೆ ಅಡಿಯಲ್ಲಿ ರೂ. 46,54,58,727/–ಗಳ ಅನುದಾನವನ್ನು ರಾಜ್ಯ ಸರ್ಕಾರಕ್ಕೆ ಬಿಡುಗಡೆ ಮಾಡಲಾಗಿದೆಯೆಂದು ತಿಳಿಸಿ, ಆ ಮೊತ್ತವನ್ನು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 06 ಪಿಎಫ್‌ಎಸ್ 2007, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2007–08ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–115–0–00–125–ಪೊಲೀಸ್ ಪಡೆ ಆಧುನೀಕರಣ ಅಡಿಯಲ್ಲಿ ಕೇಂದ್ರ ಸರ್ಕಾರದಿಂದ ಬಿಡುಗಡೆಯಾಗಿರುವ ಅನುದಾನ ರೂ. 46.54 ಕೋಟಿಗಳನ್ನು (ನಲವತ್ತಾರು ಕೋಟಿ ಐವತ್ತ ನಾಲ್ಕು ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರವು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ:1254:ವೆಚ್ಚ–6: 2007, ದಿನಾಂಕ: 7–11–2007ರ ಸಹಮತಿಯ ಮೇರೆಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2010

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಒಳಾಡಳಿತ ಇಲಾಖೆ

(ಪೊಲೀಸ್ ವೆಚ್ಚ)